# ಕೊಡಗು  ಸಂಗಾತಿ

ಅಗಸ್ಟ್ 1 - 15, 2005

ಪಾಕ್ಷಿಕ ಪತ್ರಿಕೆ

12058, ಸಂಗಾತಿ ನಿಲಯ, ವಿಜಯನಗರ 4 ನೇ ಹಂತ, 2 ನೇ ಘಟ್ಟ, ಹಿನ್‌ಕಲ್ ಅಂಚೆ, ಮೈಸೂರು - 570 017

ಸಂಪಾದಕಿ : ಪಟ್ಟಡ ಶೀಲಾಮಣಿ RNI No. : 10-01-96 TCI Kar. 09592 ಕನ್ನಡ ಮತ್ತು ಗೌಡ ಕನ್ನಡದಲ್ಲಿ ಪ್ರಕಟಿತ

KA / SK / MYS / 88 / 2003-05, ಸಂಪುಟ:1 ಸಂಚಿಕೆ : 01 ಪುಟಗಳು : 16 ಬೆಲೆ : 6-00 ರೂ.



: ಲೇಖನ ಒಳಪುಟದಲ್ಲಿ

## ಕರ್ನಾಟಕದ ರಾಜಧಾನಿ ಬೆಂದಕಾಳೂರು (ಬೆಂಗಳೂರು) ನಿರ್ಮಾತ

# ಶ್ರೀ ಮಾಗಡಿ ಕೆಂಪೇಗೌಡರು

# ಹೊರಸೂಸುವ ಪ್ರತಿಭೆ



| | | |
|---|---|---|
| ಹೆಸರು | : | ಕು. ಶೋಭಾ ಕರಂದ್ಲಾಜೆ |
| ಹುಟ್ಟಿದ ದಿನಾಂಕ | : | 23-10-1966 |
| ಶಿಕ್ಷಣ | : | ಎಂ. ಎ., ಎಂ.ಎಸ್.ಡಬ್ಲ್ಯು. |
| ವಿಳಾಸ | : | ಕರಂದ್ಲಾಜೆ ಮನೆ,<br>ಚಾರ್ವಾಕ ಗ್ರಾಮ ಮತ್ತು ಅಂಚೆ,<br>ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ. |
| ಶಿಕ್ಷಣದ ವಿವರ | : | ಎಸ್. ಎಸ್. ಎಲ್. ಸಿ.,<br>ಬಡಗೋಡಿ ಗ್ರಾಮ, ಪುತ್ತೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ<br>ಬಿ. ಎ., : ಸೇಂಟ್ ಫಿಲೋಮಿನಾ ಕಾಲೇಜು, ಪುತ್ತೂರು<br>ಎಂ. ಎ., : ಮೈಸೂರು ವಿಶ್ವವಿದ್ಯಾನಿಲಯ (1996)<br>ಎಂ. ಎಸ್. ಡಬ್ಲ್ಯು., : ರೋಶನಿ ನೀಲಯ, ಮಂಗಳೂರು (1990) |
| ಅನುಭವ | : | ಐ. ಎಸ್. ಎಸ್. ಟಿ. ಬೆಂಗಳೂರಿನಲ್ಲಿ ಸಂಶೋಧನಾ<br>ಸಹಾಯಕಿಯಾಗಿ 1990 ರವರೆಗೆ ಸೇವೆ ಸಲ್ಲಿಸಿದ್ದಾರೆ. |
| | : | ಮೆಡಿಕೋ ಸೋಷಿಯಲ್ ವರ್ಕರ್ ಆಗಿ<br>ಕಮ್ಯೂನಿಟಿ ಮೆಡಿಷನ್ ಡಿಪಾರ್ಟ್‌ಮೆಂಟ್,<br>ಕಸ್ತೂರಿ ಬಾ ಮೆಡಿಕಲ್ ಕಾಲೇಜು, ಮಣಿಪಾಲ<br>(1992-1998) ರವರೆಗೆ<br>ಸೆನೆಟ್ ಸದಸ್ಯರು, ಮಂಗಳೂರು ವಿಶ್ವವಿದ್ಯಾನಿಲಯ<br>(1997-2000) |
| ಸಾಮಾಜಿಕ ಮತ್ತು ರಾಜಕೀಯ ಚಟುವಟಿಕೆಗಳು | : | 1 ಪರಿಸರ ಹೋರಾಟ, ಭಾರತೀಯ ಕಿಸಾನ್ ಸಂಘ, ರಾಷ್ಟ್ರಸೇವಿಕ ಸಮಿತಿ, ಸಂಘಟನೆಗಳ ಸಕ್ರಿಯ ಕಾರ್ಯಕರ್ತೆ.<br>2. ಉಡುಪಿ ಜಿಲ್ಲಾ ಮಹಿಳಾ ಮೋರ್ಚಾ ಪ್ರಧಾನ ಕಾರ್ಯದರ್ಶಿ. (1998) ಇದರ ಮುಖಾಂತರ ಸಕ್ರೀಯ ರಾಜಕಾರಣಕ್ಕೆ ಸೇರ್ಪಡೆ.<br>ತದನಂತರ ಭಾರತೀಯ ಜನತಾ ಪಾರ್ಟಿಯ ಪೂರ್ಣಾವಧಿ ಕಾರ್ಯಕರ್ತೆಯಾಗಿ 1998 ರಿಂದ ಇಲ್ಲಿಯವರೆಗೆ ಕೆಳಗೆ ನಮೂದಿಸಿದ ಜವಾಬ್ದಾರಿ ನಿರ್ವಹಿಸಿದ್ದಾರೆ.<br>1. ರಾಜ್ಯ ಮಹಿಳಾ ಮೋರ್ಚಾ ರಾಜ್ಯ ಕಾರ್ಯದರ್ಶಿ,<br>2. ಭಾರತೀಯ ಜನತಾ ಪಾರ್ಟಿ ರಾಜ್ಯ ಕಾರ್ಯದರ್ಶಿ 2000ರಿಂದ ಇಲ್ಲಿಯವರೆಗೆ.<br>(ಇವರ ತಂದೆ ಮೋನಪ್ಪ ಗೌಡ, ತಾಯಿ ಪೂವಕ್ಕ ಮತ್ತು ಇಬ್ಬರು ತಂಗಿಯರು ಹಾಗೂ ಒಬ್ಬ ಸಹೋದರನಿರುವ ಚಿಕ್ಕ ಸಂಸಾರ.) |

-ಪಟ್ಟಡ ಪ್ರಭಾಕರ



# 2005, ಅಗಸ್ಟ್ 1 ರಿಂದ 15ರ ತನಕ






| | |
|---|---|
| ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ ಮತ್ತು ಕೋರಿಯರ್ ಸರ್ವಿಸ್ ಇತ್ಯಾದಿ | ಕೊಡಗು ಸಂಗಾತಿ, 12058, ಸಂಗಾತಿ ನಿಲಯ, ವಿಜಯನಗರ 4ನೇ ಹಂತ, 2ನೇ ಘಟಕ, ಹಿನಕಲ್ ಅಂಚೆ, ಮೈಸೂರು - 17. ಫೋನ್:0821/2901109 |
| | ಕುಂಟುಪುಣಿ ರಾಮಕೃಷ್ಣ, ಕಾವೇರಿ ಆಟೋಮೊಬೈಲ್, ರಿಂಗ್ ರೋಡ್ ಸರ್ಕಲ್, ಹಿನಕಲ್ ಅಂಚೆ, ಮೈಸೂರು - 17 Mobile : 94483-90855 |
| ಮಡಿಕೇರಿಯಲ್ಲಿ ಸಂಗಾತಿ ಕಛೇರಿ : ಚಿಹ್ನೆ, ಹಸೆಮಣೆ ಪುಸ್ತಕ/ಚಾಂಪ ಶುಭಾಶಯ ಕಾರ್ಡ್ಸ್/ಕುರುಂಜಿಯವರ ಕ್ಯಾಸೆಟ್ಸ್, ಅಮರಶ್ರೀ ಸ್ಮರಣ ಸಂಚಿಕೆ ಇತ್ಯಾದಿಗ ಲಭ್ಯ. | ಕೊಡಗು ಸಂಗಾತಿ C/o ಪಾಂಡನ ಕಾಂಪೌಂಡ್, 21/4, (1), ಅಪ್ಪಯ್ಯ ಗೌಡ ರಸ್ತೆ, ಜೂನಿಯರ್ ಕಾಲೇಜು ಹತ್ತಿರ, ಮಡಿಕೇರಿ - 571 201 ಬೈತಡ್ಕ ಜಾನಕಿ ಬೆಳ್ಯಪ್ಪ ಫೋನ್ : 228047 ಪಾಂಡನ ರತಿ ಚಂದ್ರಶೇಖರ್ ಫೋನ್ : 228380 |
| ವಿರಾಜಪೇಟೆ | ಬಾರಿಕೆ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/256591 |
| ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/273370 |
| ಬೆಂಗಳೂರು ಮಹಾನಗರ | ನಂಗಾರು ಮೋದನ ಪ್ರಿಯ, ನಂ. 11, ಮೊದಲನೆ ಅಡ್ಡ ರಸ್ತೆ, ಪೆಮ್ಮಯ್ಯ ಬ್ಲಾಕ್, ಜೇಸಿನಗರ, ಬೆಂಗಳೂರು-560 006 Mobile : 94482 25160 |

ಚಂದಾ ವಿವರ : ಜೀವಾವಧಿ ಸದಸ್ಯತನ - 2000 ರೂ. ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ),

ಕೊಡಗು ಸಂಗಾತಿಯನ್ನು ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಕೊಡಗಿಗೊಂದು ರೈಲು ಮಾರ್ಗ ಅವಶ್ಯಕ.

ದಿನ ದಿನಕ್ಕೆ ಪ್ರಪಂಚದ ದೂರ ಹತ್ತಿರವಾಗುತ್ತಿದ್ದರೂ ಕೊಡಗಿಗೊಂದು ರೈಲು ಮಾರ್ಗ ಅತೀ ಅವಶ್ಯ. ಜನ ಒಂದು ಊರಿನಿಂದ ಇನ್ನೊಂದು ಊರಿಗೆ ಹೋಗುವುದಕ್ಕೆ ಬೇಕಾದಷ್ಟು ವಾಹನ ಸೌಲಭ್ಯ ಇದೆ. ಆದರೆ ಕೊಡಗಿಗೆ ಈ ಯಾವುದೇ ಜನ ಉಪಯೋಗ ವಸ್ತುಗಳು ಹಾಗೂ ಕೊಡಗಿನ ಜನರು ಉತ್ಪತ್ತಿ ಮಾಡುತ್ತಿರುವ ವಸ್ತುಗಳಿಗೆ ಸರಿಯಾದ ಬೆಲೆ ಸಿಗಬೇಕಾದರೆ ಒಂದು ರೈಲು ಮಾರ್ಗ ಅತೀ ಅವಶ್ಯಕ.

ಮೈಸೂರಿನಿಂದ ಕುಶಾಲನಗರದವರೆಗಾದರೂ ಎಷ್ಟೋ ಸುಧಾರಣೆಯಾಗುತ್ತದೆ. ಕುಶಾಲನಗರದವರೆಗೆ ಯಾವ ಬೆಟ್ಟ ಗುಡ್ಡಗಳು ಇಲ್ಲದ್ದರಿಂದ ಯಾವ ಸುರಂಗ ಕೊರೆಯುವ ಕೆಲಸವಿಲ್ಲ. ಆದ್ದರಿಂದ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಈ ನಿಟ್ಟಿನಲ್ಲಿ ಮನಸ್ಸು ಮಾಡಬೇಕಾಗಿದೆ. ಇದರಿಂದಾಗಿ ಕೊಡಗಿನ ಜನರಿಗಲ್ಲದೆ ಹುಣಸೂರು ಹಾಗೂ ಪಿರಿಯಾಪಟ್ಟಣದ ಜನರಿಗೂ ಸಹಾಯಕ ವಾಗುವುದು.

ಕೊಡಗಿನ ಜನ ಕೃಷಿ ಒಳ್ಳೆ ಮೆಣಸು ಬೆಳೆಗಳ ಕ್ರಯ ಕಡಿಮೆಯಾದುದರಿಂದ ಅವರ ಮುಂದಿನ ಭವಿಷ್ಯವನ್ನು ಈ ರೀತಿಯ ಹೊಸ ರೀತಿಯ ಸೌಕರ್ಯ ಅತೀ ಅವಶ್ಯಕವಾಗಿದೆ. ಇದರಿಂದಾಗಿ ವಸ್ತುಗಳ ವಹಿವಾಟಿಗೆ ಮಾತ್ರ ಸಹಾಯಕ ವಾಗುವುದಲ್ಲದೆ ಕೊಡಗಿನ ಕೈಗಾರಿಕಾ ಅಭಿವೃದ್ಧಿಗೆ ಸಹಾಯಕವಾಗಿ ಕೊಡಗಿನ ಜನ ಬರೇ ವ್ಯವಸಾಯದ ಉತ್ಪತ್ತಿಯನ್ನೇ ನಂಬಿ ಕೊಂಡಿರದೆ ಕೊಡಗು ಜಿಲ್ಲೆಯ ಕೈಗಾರಿಕಾ ಅಭಿವೃದ್ಧಿಗೆ ಸಹಾಯವಾಗಬಹುದೆಂದು ಸಂಗಾತಿಯ ನಿಜವಾದ ಆಶಯವಾಗಿದೆ.

## ಕೊಡಗಿನಲ್ಲಿ ಮಹಿಳೆಯರ ಪ್ರಮಾಣ ಗಣನೀಯ ಏರಿಕೆ

ಕರ್ನಾಟಕವೂ ಸೇರಿದಂತೆ ದೇಶದಲ್ಲಿ ಮಹಿಳೆಯರ ಅನುಪಾತದಲ್ಲಿ ಭಾರೀ ವ್ಯತ್ಯಾಸಗಳಿದ್ದರೂ, ಕೊಡಗು ಜಿಲ್ಲೆಯಲ್ಲಿ ಪ್ರತೀ ಸಾವಿರ ಪುರುಷರಿಗೆ ೯೩೩ ಮಹಿಳೆಯರಿದ್ದರು. ೧೯೯೧ರಲ್ಲಿ ಈ ಪ್ರಮಾಣ ೯೭೯ ಕ್ಕೆ ಏರಿದರೆ ೨೦೦೧ರ ಗಣತಿಯ ಪ್ರಕಾರ ಪ್ರತೀ ಸಾವಿರ ಪುರುಷರಿಗೆ ೯೯೫ ಮಂದಿ ಮಹಿಳೆಯರಿರುವುದು ಕಂಡು ಬಂದಿದೆ. ಈ ಪ್ರಮಾಣದಲ್ಲಿ ಕೇವಲ ಐದು ಏರಿಕೆಯಾದಲ್ಲಿ ಪುರುಷರ ಪ್ರಮಾಣವನ್ನು ಸರಿಗಟ್ಟಲಿದ್ದಾರೆ.

ಜಿಲ್ಲಾ ಆರೋಗ್ಯ ಇಲಾಖೆ ನಡೆಸಿದ ಸಮೀಕ್ಷೆಯ ಪ್ರಕಾರ ಕೊಡಗು ಜಿಲ್ಲೆಯಲ್ಲಿ ಶೈಕ್ಷಣಿಕ ಮಟ್ಟ ಹೆಚ್ಚಿಸುವುದು, ಆರೋಗ್ಯದಲ್ಲಿನ ಸುಧಾರಣೆ, ಹೆಣ್ಣು ಭ್ರೂಣ ಹತ್ಯೆಯಂತಹ ಪ್ರಕರಣಗಳು ಕಡಿಮೆಯಾಗಿರುವುದು ಮಹಿಳೆಯರ ಅನುಪಾತ ಹೆಚ್ಚಲು ಕಾರಣವಾಗಿದೆ ಎಂದು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ ಡಾ. ವಿಶ್ವನಾಥಕುಮಾರ್ ಇತ್ತೀಚೆಗೆ ತಿಳಿಸಿದ್ದಾರೆ. ೨೦೦೧ರ ಜನಗಣತಿ ಪ್ರಕಾರ ಕೊಡಗಿನಲ್ಲಿ ಒಟ್ಟು ೫,೪೫,೨೨೨ ಜನಸಂಖ್ಯೆಯಿದ್ದು ಈ ಪೈಕಿ ೨,೭೩,೨೧೦ ಮಂದಿ ಪುರುಷರು ಹಾಗೂ ೨,೭೨,೧೧೨ ಮಂದಿ ಮಹಿಳೆಯರಿದ್ದಾರೆ. ಜಿಲ್ಲೆಯಲ್ಲಿ ೨೮.೧೭ ಮಂದಿ ಅಕ್ಷರಸ್ಥರಾಗಿದ್ದು ಈ ಪೈಕಿ ಪುರುಷರ ಪ್ರಮಾಣ ಶೇ. ೭೫.೫೩ ರಷ್ಟಿದೆ ಎಂದು ಹೇಳಲಾಗಿದೆ.

ಜಿಲ್ಲೆಯಲ್ಲಿ ಜನನ ಪ್ರಮಾಣ ೧೭ರಷ್ಟಿದ್ದರೆ ಸಾವಿನ ಪ್ರಮಾಣ ೪.೧೯ರಷ್ಟು ಮಾತ್ರ, ಮಕ್ಕಳ ಸಾವಿನ ಪ್ರಮಾಣ ೧೯.೫ ರಷ್ಟಿದ್ದರೆ ತಾಯಿಯ ಗರ್ಭದಲ್ಲಿ ಸಾಯುವ ಮಕ್ಕಳ ಪ್ರಮಾಣ ಕೇವಲ ೧.೧೫ ಮಾತ್ರ. ಎಂದು ಸಮೀಕ್ಷೆ ತಿಳಿಸಿದೆ. ಆದರೆ ರಾಜ್ಯದಲ್ಲಿ ಜನನ ಪ್ರಮಾಣ ಪ್ರತೀ ಸಾವಿರ ಮಂದಿಗೆ ೨೨.೭ ಇದ್ದರೆ, ಸಾವಿನ ಪ್ರಮಾಣ ೭.೬, ಮಕ್ಕಳ ಸಾವಿನ ಪ್ರಮಾಣ ಪ್ರತೀ ಸಾವಿರಕ್ಕೆ ೫೧ ಇದೆ. ಗರ್ಭಾವಸ್ಥೆಯಲ್ಲೇ ಸಾಯುವ ಮಕ್ಕಳ ಪ್ರಮಾಣ ಕೇವಲ ೪ ಎಂದು ಸಮೀಕ್ಷೆ ಹೇಳಿದೆ.

ಆರೋಗ್ಯ ಸುಧಾರಣೆ ಕಾರ್ಯಕ್ರಮದಡಿ ಕೊಡಗು ಜಿಲ್ಲೆಯಲ್ಲಿ ಗಣನೀಯ ಸಾಧನೆಯಾಗಿದ್ದು, ಈ ಹಿನ್ನಲೆಯಲ್ಲಿ ಕಳೆದ ಸಾಲಿನಲ್ಲಿ ಜಿಲ್ಲಾ ಆರೋಗ್ಯ ಅಧಿಕಾರಿಯವರಿಗೆ ಸರ್ಕಾರ ವೈದ್ಯಶ್ರೀ ಪ್ರಶಸ್ತಿ ನೀಡಿ ಗೌರವಿಸಿದೆ.

ಜಿಲ್ಲೆಯಲ್ಲಿ ಒಟ್ಟು ೨೬ ಪ್ರಾಥಮಿಕ ಆರೋಗ್ಯ ಕೇಂದ್ರ ೬ ಸಮುದಾಯ ಆರೋಗ್ಯ ಕೇಂದ್ರ ಮೂರು ಪ್ರಾಥಮಿಕ ಆರೋಗ್ಯ ಘಟಕ ಹಾಗೂ ಗಿರಿಜನರ ಅನುಕೂಲಕ್ಕಾಗಿ ಕಲ್ಲಳ್ಳ ಹಾಗೂ ಬಸವನಹಳ್ಳಿಯಲ್ಲಿ ತಲಾ ಒಂದು ಸಂಚಾರ ಆರೋಗ್ಯ ಘಟಕಗಳಿವೆ. ಈಗ ನಾಪೋಕ್ಲು ಸಮುದಾಯ ಆರೋಗ್ಯ ಕೇಂದ್ರವನ್ನು ಮೇಲ್ದರ್ಜೆಗೆ ಏರಿಸಲಾಗುತ್ತಿದ್ದು, ಸೋಮವಾರ ಪೇಟೆ ತಾಲ್ಲೂಕಿನ ಬಿಳಿಗೇರಿಯಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ ಸ್ಥಾಪಿಸಲು ಸರ್ಕಾರ ಮಂಜೂರಾತಿ ನೀಡಿದೆ. ಅಲ್ಲದೆ ೨೧ ಲಕ್ಷ ರೂ. ಗಳನ್ನು ಈಗಾಗಲೇ ಬಿಡುಗಡೆ ಮಾಡಲಾಗಿದ್ದು, ಸಧ್ಯದಲ್ಲೇ ಕಾಮಗಾರಿ ಆರಂಭವಾಗಲಿದೆ. ಮಲ್ದಾರೆ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕಾಗಿ ಬಿಬಿಟಿಸಿಯಿಂದ ಒಂದು ಏಕರೆ ಜಾಗವನ್ನು ಪಡೆಯಲಾಗುತ್ತಿದ್ದು, ಇದರೊಂದಿಗೆ ಎಲ್ಲಾ ಪ್ರಾಥಮಿಕ ಹಾಗೂ ಸಮುದಾಯ ಆರೋಗ್ಯಗಳಿಗೆ ಸ್ವಂತ ಕಟ್ಟಡವಿರುವ ಏಕೈಕ ಜಿಲ್ಲೆ ಎಂಬ ಹೆಗ್ಗಳಿಕೆಗೂ ಕೊಡಗು ಜಿಲ್ಲೆ ಪಾತ್ರವಾಗಿದೆ ಎಂದು ಆರೋಗ್ಯಾಧಿಕಾರಿ ಡಾ. ವಿಶ್ವನಾಥಕುಮಾರ್ ಇತ್ತೀಚೆಗೆ ತಿಳಿಸಿದ್ದಾರೆ.

ಜಿಲ್ಲೆಯಲ್ಲಿ ಒಟ್ಟು ೮೩ ಮಂದಿ ವೈದ್ಯರ ಹುದ್ದೆ ಮಂಜೂರಾಗಿದ್ದು, ಈ ಪೈಕಿ ೨೩ ಮಂದಿ ಖಾಯಂ ಹಾಗೂ ೩೭ ಮಂದಿ ಗುತ್ತಿಗೆ ಆಧಾರದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಇನ್ನು ೨೩ ವೈದ್ಯರ ಕೊರತೆಯಿದೆ. ಅಲ್ಲದೆ ೯ ಮಂದಿ ಎಎನ್‌ಎಂ ೬೨ ಮಂದಿ ಪುರುಷ ಆರೋಗ್ಯ ಸಹಾಯಕರು, ೩೪ ಮಂದಿ ಫಾರ್ಮಸಿಸ್ಟ್ ಮತ್ತು ೩೮ ಮಂದಿ ಗುಮಾಸ್ತರ ಹುದ್ದೆಗಳು ಖಾಲಿ ಇವೆ ಎಂದು ವಿವರಿಸಿರುವ ಅವರು, ಇದರೊಂದಿಗೆ ತಜ್ಞ ವೈದ್ಯರ ಕೊರತೆ ಇದೆ ಎಂದು ಹೇಳಿದ್ದಾರೆ.

-ಸಂಗಾತಿ

# ಕರ್ನಾಟಕದ ಜನಪ್ರಿಯ ಗೌಡರು

*ಲೇಖಕರ ಪರಿಚಯ:* ಲೇಖನದ ಕರ್ತೃಗಳಾದ ಶ್ರೀ ಎಂ. ಮುನಿರಾಜಪ್ಪನವರು ಕನಕಪುರ ರೂರಲ್ ಕಾಲೇಜಿನ ಇತಿಹಾಸ ವಿಭಾಗದ ಮುಖ್ಯಸ್ಥರು, ಸಂಶೋಧನೆಯನ್ನು ಹವ್ಯಾಸವನ್ನಾಗಿ ಮಾಡಿಕೊಂಡವರು ಈಗಾಗಲೇ ಇವರ ಹಲವಾರು ಲೇಖನಗಳು ಪತ್ರಿಕೆಗಳಲ್ಲಿ ಬೆಳಕು ಕಂಡಿದ್ದು ಅದರಲ್ಲೂ ಸ್ಥಳೀಯ ಇತಿಹಾಸದ ಬಗ್ಗೆ ಹೆಚ್ಚು ಹಿತಾಸಕ್ತಿಯನ್ನು ಬೆಳೆಸಿಕೊಂಡಿರುವವರು ಸ್ಥಳೀಯ ಇತಿಹಾಸ ನಿರ್ಲಕ್ಷಿಸಲ್ಪಟ್ಟಿರುವ ಈ ಸಂದರ್ಭದಲ್ಲಿ ಇಂತಹ ಲೇಖನಗಳಿಗೆ ಹೆಚ್ಚಿನ ಮಹತ್ವವಿದೆ.

ಕರ್ನಾಟಕ ಜನಪ್ರಿಯ ಗೌಡರು ಅದರಲ್ಲೂ ಬೆಂಗಳೂರು ನಗರ ಸ್ಥಾಪಕ ಕೆಂಪೇಗೌಡರ ಆದರ್ಶ ಮಹಾತ್ವಾಕಾಂಕ್ಷೆ ಕುರಿತದ್ದು ಕೆಂಪೇಗೌಡರ ಕೊಡುಗೆ ಬೆಂಗಳೂರು ನಗರಕ್ಕೆ ಸೀಮಿತವಲ್ಲ ಅದು ಕರ್ನಾಟಕವೇ ಹೆಮ್ಮೆ ಪಡುವಂತಾದ್ದೆಂಬುದೆ ಈ ಲೇಖಕರ ಆಶಯ.

- ಸಂಪಾದಕಿ

ಕರ್ನಾಟಕವನ್ನಾಳಿದ ಪ್ರಸಿದ್ಧ ರಾಜಮನೆತನಗಳಾದ ಹೊಯ್ಸಳ ಮತ್ತು ವಿಜಯ ನಗರದ ಸಾಮ್ರಾಜ್ಯ ಭಾರತೀಯ ಸಂಸ್ಕೃತಿಗೆ ಚಿರಸ್ಮರಣೀಯ ಕೊಡುಗೆ ಗಳನ್ನು ನೀಡಿದೆ. ಇಂತಹ ಪ್ರಭಾವ ಶಾಲಿ ಮನೆತನದ ಸಾಮಂತರಾಗಿ ಇಲ್ಲವೆ ಪಾಳೆಗಾರರಂತೆ ಏಳಿಗೆಗೆ ಬಂದ ಅನೇಕ ರಾಜ ಮನೆತನಗಳಲ್ಲಿ ಯಲಹಂಕ ಪ್ರಭುಗಳ ಸಂತತಿಯೂ ಒಂದಾಗಿದೆ. ವಿಜಯನಗರದ ಸಾಮ್ರಾಜ್ಯದ ಸಮಕಾಲೀನರಾಗಿ ಸ್ವಾಮಿನಿಷ್ಠೆ, ಶೌರ್ಯ, ಸಾಹಸಕ್ಕೆ ಹೆಸರಾಗಿದ್ದ ನಾಡ ಜನತೆಯ ಮೂಲಭೂತ ಸೌಕರ್ಯಗಳಿಗೆ ಪ್ರಾಶಸ್ತ್ಯ ನೀಡಿದ್ದ ಯಲಹಂಕ ನಾಡಪ್ರಭುಗಳು ಜನಾನುರಾಗಿಗಳಾಗಿದ್ದರು. ಕೆರೆ-ಕಟ್ಟೆ, ಕಲ್ಯಾಣಿ, ಛತ್ರಗಳು, ಗುಡಿ ಗೋಪುರ, ಕೋಟೆ-ಕೊತ್ತಲಗಳಷ್ಟೇ ಅಲ್ಲದೆ, ಅಗ್ರಹಾರಗಳನ್ನು ಸ್ಥಾಪಿಸಿದ ಕೀರ್ತಿ ಇವರಿಗುಂಟು. ವಿಶ್ವದಲ್ಲೇ ಅತ್ಯಂತ ಪ್ರಸಿದ್ಧ ನಗರವಾಗಿ ಬೆಳೆಯುತ್ತಿರುವ ಕರ್ನಾಟಕ ರಾಜಧಾನಿ ಬೆಂಗಳೂರು ಸ್ಥಾಪನೆ ಕರ್ನಾಟಕದ ಇತಿಹಾಸಕ್ಕೆ ಇವರ ಹೆಮ್ಮೆಯ ಕೊಡುಗೆಯೆಂದರೆ ಅತಿಶಯೋಕ್ತಿಯಲ್ಲ. ಸಾರ್ವಭೌಮರಿಗೆ ಸಕಾಲದಲ್ಲಿ ಸೈನಿಕ ನೆರವು ನೀಡುತ್ತಾ ಅವರ ಗಡಿಗಳನ್ನು ರಕ್ಷಿಸುವ ಜವಾಬ್ದಾರಿಯನ್ನು ಹೊತ್ತು ಜನಪ್ರಿಯ ಗೌಡರಾಗಿ ಆಳಿದರು.

ಇಂದಿನ ಬೆಂಗಳೂರು, ಕೋಲಾರ, ತುಮಕೂರು, ಮಂಡ್ಯ ಜಿಲ್ಲೆಗಳು ಹಾಗೂ ಮೈಸೂರು ಮತ್ತು ಹಾಸನ ಜಿಲ್ಲೆಯ ಕೆಲವು ಭಾಗಗಳನ್ನೊಳಗೊಂಡ ಪ್ರದೇಶಕ್ಕೆ ಕ್ರಿ. ಶ. 14-15 ನೇ ಶತಮಾನದಲ್ಲಿ ಮೊರಸನಾಡು ಅಥವಾ ಯಲಹಂಕ ನಾಡೆಂಬ ಹೆಸರಿತ್ತು. ವೀರಭದ್ರ ವಿಜಯದ ಉಲ್ಲೇಖವನ್ನು ಗಮನಿಸುವುದಾದರೆ (ಕರ್ನಾಟಕಾಂಧ್ರ ದ್ರಾವಿಡ ವನಿತಾ ಕರ್ಣಪೂರಾನ ವ್ಯತನ್ವನ್) ಯಲಹಂಕನಾಡು ಕನ್ನಡ, ತೆಲಗು ಮತ್ತು ತಮಿಳು ಭಾಷಾ ಪ್ರದೇಶಗಳನ್ನು ಒಳಗೊಂಡಿತ್ತು. ಕಾಲಕ್ಕನುಗುಣವಾಗಿ ಬದಲಾಗುತ್ತಿದ್ದ ಗಡಿಯನ್ನು ನಿರ್ದಿಷ್ಟವಾಗಿ ಗುರುತಿಸುವುದು ಕಷ್ಟಸಾಧ್ಯ. ಆವತಿ, ಯಲಹಂಕ, ಬೆಂಗಳೂರು, ಮಾಗಡಿ, ಸಾವನದುರ್ಗ (ನೆಲಪಟ್ಟಿ) ಇವರ ರಾಜಧಾನಿಗಳಾಗಿದ್ದವು.

ಈ ಸಂತತಿಯ ಇತಿಹಾಸ ರಚನೆಗೆ ಪ್ರಾಕ್ಚಾರಿತ್ರಿಕ ಮತ್ತು ಸಾಹಿತ್ಯಾಧಾರಗಳು ಲಭ್ಯವಿದ್ದರೂ ಮೂಲ ವಂಶಾವಳಿ ಮತ್ತು ಕಾಲಕ್ಕೆ ಸಂಬಂಧಿಸಿದಂತೆ ಭಿನ್ನಾಭಿಪ್ರಾಯಗಳನ್ನು ಇತಿಹಾಸ ರಚನೆಯಲ್ಲಿ ಅಲ್ಪಸ್ವಲ್ಪ ಗೊಂದಲ ವುಂಟಾಗುವುದು ಸಹಜ. ಆಳವಾದ ಸಂಶೋಧನೆ ಮತ್ತು ವೈಜ್ಞಾನಿಕ ಅಧ್ಯಯನಗಳು ಈ ಸಮಸ್ಯೆಗಳಿಗೆ ಪರಿಹಾರ ಗಳಾದವು.

ಅನೇಕ ಶಾಸನಗಳು, ನಾಣ್ಯಗಳು, ದೇವಾಲಯಗಳು ಕೋಟೆ ಕೊತ್ತಲಗಳು ಗಿರಿದುರ್ಗ ಗಳು, ವೀರಗಲ್ಲು, ಮಾಸ್ತಿಗಲ್ಲು, ಕೆರೆ ಕಟ್ಟೆ ಕಲ್ಯಾಣಿಗಳು ಮತ್ತು ಇತರ ಶಿಲಾ ಮೂರ್ತಿಗಳು ಪ್ರಾಕ್ತನ ಶಾಸ್ತ್ರಧಾರಗಳ ಪಟ್ಟಿಯಲ್ಲಿ ಇತಿಹಾಸ ರಚನೆಗೆ ಸಹಕಾರಿಯಾಗಿದೆ. ಆ ಕಾಲದಲ್ಲಿ ರಚನೆಯಾದ ಸಾಹಿತ್ಯಾಧಾರಗಳೂ ಉತ್ತಮ ಮಾಹಿತಿಗಳನ್ನು ಒದಗಿಸುತ್ತವೆ. ಪ್ರಾಕ್ತನ ಮತ್ತು ಸಾಹಿತ್ಯಾಧಾರಗಳ ನಡುವೆ ಗೊಂದಲಮಯ ಅಂಶಗಳಿದ್ದರೂ ಬಹುತೇಕ ರಾಜಮನೆತನದ ಇತಿಹಾಸದಲ್ಲೂ ಇದು ಸಾಮಾನ್ಯ. ಕೆಂಪೇಗೌಡ ಜಯಪ್ರಶಸ್ತಿ ವೀರಭದ್ರ ವಿಜಯ, ಕಾಕುದಿರಿ ಮಹಾತ್ಮೆ, ಹುಲಿಕಲ್ಲು ಸಂಸ್ಥಾಪಕರ ಚರಿತ್ರೆ, ಚನ್ನಬಸವ ಪುರಾಣ, ಕಂಠೀರವ ನರಸರಾಜ ವಿಜಯ, ಚಿಕ್ಕದೇವರಾಜ ವಿಜಯ, ಗಂಗೆಗೌರಿ ವಿಲಾಸ, ನಿರಂಜನ ವಂಶರತ್ನಾಕರ, ಇಮ್ಮಡಿ ತಮ್ಮರಾಯ, ಕೆಂಪರಾಯ, ಪದ ತಾಳೆಗರಿ ಪ್ರತಿಗಳ ಮತ್ತು ಜನಪದ ಸಾಹಿತ್ಯ ಉಪಯುಕ್ತ ಮಾಹಿತಿಗಳನ್ನು ಒದಗಿಸುತ್ತವೆ.

ಈ ಮೂಲ ಕೃತಿಗಳಲ್ಲದೇ ಬುಕನ್ ಪ್ರವಾಸ ಕಥನ, ಎಫಿಗ್ರಾಫಿಯ ಕರ್ನಾಟಕ, ಮೈಸೂರು ಗೆಜೆಟಿಯರ್, ಬೆಂಗಳೂರು ಗ್ರಾಮಾಂತರ ಗೆಜೆಟಿಯರ್.ಬಿ.ಎಲ್. ರೈಸ್. ಎಸ್.ಕೆ. ನರಸಿಂಹಯ್ಯ, ಬಿ. ಪುಟ್ಟಯ್ಯ, ಹಯವದನರಾವ್, ಆರ್. ರಾಮಾಶಾಸ್ತ್ರಿ, ದೇಜಗೌಡ, ಎಸ್. ವಿ. ಮಂಜುಳ, ಎಸ್. ಎನ್. ಲೋಕನಾಥ ಹಾಗೂ ಕೆ. ಆರ್. ಲಕ್ಷ್ಮಣ್‌ರವರ ಸಾರ್ಥಕ ಕೃತಿಗಳು, ಲೇಖನಗಳು ಮತ್ತು ಸಂಗ್ರಹಗಳು ಯಲಹಂಕ ಸಂತತಿಯ ಮೇಲೆ ಬೆಳಕು ಚೆಲ್ಲುವಲ್ಲಿ ಸಹಕರಿಸುತ್ತವೆ.

ಕ್ರಿ. ಪೂ. 4 ನೇ ಶತಮಾನದಿಂದ ಪ್ರಾರಂಭವಾಗುವ ಕರ್ನಾಟಕ ಇತಿಹಾಸಕ್ಕೆ ರಾಜಕೀಯ ಮತ್ತು ಸಾಂಸ್ಕೃತಿಕ ಬುನಾದಿ

ಹಾಕಿದ ಕೀರ್ತಿ ಕ್ರಿ. ಶ. 10ನೇ ಶತಮಾನದ ವೇಳೆಗೆ ಗಂಗವಾಡಿಯನ್ನು ಚೋಳರು ವಶಪಡಿಸಿಕೊಂಡರು. ಕ್ರಿ. ಶ. 1117 ರಲ್ಲಿ ಹೊಯ್ಸಳವಿಷ್ಣುವರ್ಧನ ಗಂಗವಾಡಿಯನ್ನು ಪುನರ್ವಶಪಡಿಸಿಕೊಂಡನು. ಹೊಯ್ಸಳರ ನಂತರ ವಿಜಯನಗರದ ಅಧಿಪತ್ಯಕ್ಕೊಳಪಟ್ಟ ಯಲಹಂಕನಾಡು ಸಾಮಂತ ದೊರೆಗಳು ಇಲ್ಲವೆ ಪಾಳೆಗಾರರ ನಿಯಂತ್ರಣದಲ್ಲಿತ್ತು. ಕ್ರಿ. ಶ. 1267 ರಲ್ಲಿ ಮಹಾಮುಂಡಲೇಶ್ವರ ದೇಚರಸ, ಕ್ರಿ. ಶ. 1328 ರಲ್ಲಿ ಎಚಣಗೌಡ ಈ ಪ್ರಾಂತ್ಯವನ್ನಾಳಿದ ದೊರೆಗಳೆಂದು ತಿಳಿದು ಬಂದಿರುತ್ತದೆ. ಆದ್ದರಿಂದ ಯಲಹಂಕನಾಡ ಪ್ರಭುಗಳು ಹೊಯ್ಸಳರ ಸಾಮಂತರು ಆಗಿದ್ದಿರಬಹುದು.

ಗುಮ್ಮಳಾಪುರದ ಸದ್ಗುರು ನಂಜೇಶ್ವರರಿಂದ ರಚಿತವಾಗಿರುವ ಕನ್ನಡ ಕೃತಿ ಕೆಂಪೇಗೌಡ ಜಯಪ್ರಶಸ್ತಿಯಂತೆ ಈ ಸಂತತಿಯ ವಂಶಾವಳಿಯಲ್ಲಿ ದೇಚರಣ ಎಚಣ್ಣಗೌಡ, ಬಮಿರದೇವ ಜಯಪ್ಪಗೌಡ, ಗಿಡ್ಡಪ್ಪಗೌಡ, ನಾಚಪ್ಪಗೌಡ, ಕೆಂಪನಾಚಪ್ಪಗೌಡ, ಹಿರಿಯ ಕೆಂಪೇಗೌಡ, ಇಮ್ಮಡಿ ಕೆಂಪೇಗೌಡ, ಮುಮ್ಮಡಿ ಕೆಂಪೇಗೌಡ, ದೊಡ್ಡ ವೀರಪ್ಪಗೌಡ ಮತ್ತು ಕೆಂಪವೀರಪ್ಪ ಗೌಡರವರುಗಳ ಹೆಸರುಗಳಿವೆ.

ಭೈರವದೇವ ಮತ್ತು ಕೆಂಪಾಂಬಿಕೆ ಈ ಸಂತತಿಯ ಕುಲದೇವರು ಮತ್ತು ದೇವತೆ ಬಹುತೇಕ ಒಡೆಯರು ತಮ್ಮ ಕುಲದೇವತೆಯ ಹಸಿರಿನಲ್ಲೇ ಮೆರೆದಿದ್ದಾರೆ.

ಆರ್ಥಿಕವಾಗಿ ಶೈಕ್ಷಣಿಕವಾಗಿ ಹಿಂದುಳಿದಿದ್ದರೂ ಗೌಡರ ಗತ್ತುಗಾರಿಕೆಯನ್ನೇ ತಮ್ಮ ಚಿರಾಸ್ತಿಯನ್ನಾಗಿಟ್ಟುಕೊಂಡಿರುವ ಒಕ್ಕಲಿಗರು ಇಂದಿಗೂ ಕರ್ನಾಟಕದ ಬಹುಸಂಖ್ಯಾತ ವರ್ಗ, ಕಾಯಕವೇ ಕೈಲಾಸ, ತತ್ವಕ್ಕನುಗುಣವಾಗಿ ಚಳಿ ಮಳೆ ಬಿಸಿಲಿಗೆ ತಮ್ಮನ್ನೇ ಅಡವಿಟ್ಟು ಮಣ್ಣಿನ ಮಕ್ಕಳ ಜೀವನ ಸ್ಥಿತಿ ಶೋಚನೀಯವಾಗಿದೆ. ಸಾಮಾಜಿಕ ಸಂಘರ್ಷದ ತುತ್ತೂರಿಯಾಗಿರುವ ಮೀಸಲಾತಿಗಿಂತ ಬೆಳೆಗೆ ತಕ್ಕ ಬೆಲೆ ಸಿಕ್ಕದೇ ಈ ಜನಾಂಗದವರ ಜೀವನಮಟ್ಟ ಸುಧಾರಿಸಿತು, ಯಲಹಂಕ ಪ್ರಾಂತ್ಯವನ್ನಾಳಿದ ಜನಪ್ರಿಯ ಗೌಡರು ಇಂತಹ ಒಕ್ಕಲಿಗ ಜನಾಂಗದವರು ಮೊರಸುನಾಡೆಂದು ಕರೆಯಲ್ಪಟ್ಟಿದ್ದ ಹೊಸಕೋಟೆ, ಆನೇಕಲ್, ಕೋಲಾರ ಜಿಲ್ಲೆಯ ಈ ಜನಾಂಗದವರು ಇಂದಿಗೂ ತಮ್ಮನ್ನು ಮೊರಸು ಒಕ್ಕಲಿಗರೆಂದು ಕರೆದುಕೊಳ್ಳುತ್ತಾರೆ. ಗಂಗರ ಪ್ರಾಂತ್ಯದ ಬೆಂಗಳೂರು, ತುಮಕೂರು, ಮೈಸೂರು, ಮಂಡ್ಯ, ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಯ ಈ ಜನಾಂಗದವರು ತಮ್ಮನ್ನು ಗಂಗವಾಡಿಕಾರ ಒಕ್ಕಲಿಗರೆಂದು ಕರೆದುಕೊಳ್ಳುವ ವಾಡಿಕೆಯಿದೆ.

ಯಲಹಂಕ ಸಂತತಿಯ ಮೂಲ ಪುರುಷರು ಕನ್ನಡಿಗರೆಂಬುದು ನಿರ್ವಿವಾದ. ಕಂಚಿ ಸಮೀಪದ ಎಣ್ಮಂಜಿಪುತ್ತೂರು (ಇಲ್ಲವೆ ಮುಳಬಾಗಿಲು, ತಾಲ್ಲೂಕಿನ ಎಣ್ಮಂಜಿ ಉತ್ತೂರಿನಿಂದ) ನಿಂದ ಕೌಟುಂಬಿಕ ಕಾರಣಗಳಿಂದಾಗಿ ವಲಸೆ ಬಂದು, ಪೂರ್ವಜ್ಜರ ಮೂಲ ಪ್ರದೇಶ ದೇವನಹಳ್ಳಿ ಸಮೀಪದ ಅವತ್ತಿಯಲ್ಲಿ ನೆಲೆಸಿದರು. ರಣಭೈರೇಗೌಡನೇ ಈ ಸಂತತಿಯ ಮೂಲ ಪುರುಷನೆಂದು ಹೇಳಿದ್ದರೂ ಕೆಂಪೇಗೌಡ ಜಯಪ್ರಶಸ್ತಿಯಲ್ಲಿ ಅವನ ಪೂರ್ವಜರಾದ ದೇಚರಸ ಮತ್ತು ಎಚಣ ಗೌಡರ ಉಲ್ಲೇಖಗಳಿವೆ. ರಣಭೈರೇಗೌಡ ಅವತ್ತಿಯಲ್ಲಿ ಚನ್ನಕೇಶವ ಸ್ವಾಮಿಯನ್ನು, ದೇವನಹಳ್ಳಿಯಲ್ಲಿ ವೇಣುಗೋಪಾಲ ಸ್ವಾಮಿಯನ್ನು ಪ್ರತಿಷ್ಠಾಪಿಸಿದರು.

ಜಯಗೌಡ ರಣಭೈರೇಗೌಡನ ಉತ್ತರಾಧಿಕಾರಿಯೆಂದು ಕೆಲವು ಸಾಹಿತ್ಯಾಧಾರಗಳು ತಿಳಿಸಿದರೆ, ಶಾಸನಗಳ ಪ್ರಕಾರ ಕೆಂಪನಂಜೇಗೌಡ ಎಂದಿದೆ.

ಸುಮಾರು ಕ್ರಿ. ಶ. 1418 ರಲ್ಲಿ ಜಯ ಗೌಡ ಅವತ್ತಿಯನ್ನು ಬಿಟ್ಟು ಯಲಹಕ್ಕ ಅಥವಾ ಇಳೈಪಕ್ಕಂ ಎಂದು ಕರೆಯಲ್ಪಡುತ್ತಿದ್ದ ಯಲಹಂಕಕ್ಕೆ ಬಂದು ನೆಲಸಿದ ನಂತರವೇ ಯಲಹಂಕ ನಾಡು ಎಂದು ಹೆಸರಾಯಿತು. ವಿಜಯನಗರದ ಅರಸರಿಂದ ಯಲಹಂಕ ಭೂಪಾಲ ಎಂದು ಬಿರುದು ಗಳಿಸಿದ್ದ ಜಯಗೌಡ ಪ್ರಾರಂಭದ ಪ್ರಸಿದ್ಧ ಪಾಳೇಗಾರ.

ಕೆಲವು ಸಾಹಿತ್ಯಾಧಾರಗಳಂತೆ ಜಯಗೌಡರ ಮಗನಾದ (ಹಿರಿಯ) ಗಿಡ್ಡೇಗೌಡನಿಗೆ ಕುಲದೇವತೆ ಕೆಂಪಮ್ಮನ ಅನುಗ್ರಹದಿಂದ ಜನಿಸಿದ ಗಂಡು ಮಗುವೆ ಕೆಂಪನಂಜೇಗೌಡ. ಶಾಸನಾಧಾರಗಳಂತೆ ಕೆಂಪನಂಜೇಗೌಡ 1480-1510 ರ ವರೆಗೆ ರಾಜ್ಯವಾಳಿದನು. ಕೆರೆ, ಕಾಲುವೆ, ಕಲ್ಯಾಣಿ, ದೇವಾಲಯ ಮತ್ತು ಅನ್ನಛತ್ರಗಳನ್ನು ನಿರ್ಮಿಸಿ ಕೀರ್ತಿ ಗಳಿಸಿದನು. ಮಾಧವಭಟ್ಟರು ಇವನ ಕುಲಪುರೋಹಿತರಾಗಿದ್ದರು. ಕೆಂಪನಂಜೇಗೌಡ ಮತ್ತು ಲಿಂಗಮಾಂಬೆಯರ ಪುತ್ರನೇ ಬೆಂಗಳೂರು ನಗರ ಸ್ಥಾಪಕ ಮೊದಲನೇ ಕೆಂಪೇಗೌಡ ಅಥವಾ ಹಿರಿಯ ಕೆಂಪೇಗೌಡ.

ಕ್ರಿ. ಶ. 1510ರಿಂದ 1515ರ ವರೆಗೆ ರಾಜ್ಯವಾಳಿದ ಹಿರಿಯ ಕೆಂಪೇಗೌಡ ಮಾಧವ ಭಟ್ಟರಿಂದ ವ್ಯಾಸಘಟ್ಟ ಅಥವಾ ಹೆಸರುಘಟ್ಟದಲ್ಲಿ ಶಿಕ್ಷಣ ಪಡೆದನು. ಹಿರಿಯ ಕೆಂಪೇಗೌಡ ಹುತ್ರಿದುರ್ಗ, ಹುಲಿಯೂರು ದುರ್ಗ, ಶಿವಗಂಗೆ ಮತ್ತು ರಾಮಗಿರಿಯಲ್ಲಿ ಕೋಟೆಗಳನ್ನು ಕಟ್ಟಿಸಿ ವಿಜಯನಗರ ಸಾಮ್ರಾಜ್ಯಕ್ಕೆ ದಕ್ಷಿಣದ ಸೈನಿಕ ನೆಲೆಗಳನ್ನು ಸ್ಥಾಪಿಸಿದನು. ಮೊದಲನೆ ಕೆಂಪೇಗೌಡನ ಏಳ್ಗೆ ಹಾಗೂ ವಿಜಯನಗರದೊಡನೆ ಇವನಿಗಿದ್ದ ಮಧುರ ಬಾಂಧವ್ಯವನ್ನು ಅನೇಕ ಪಾಳೇಗಾರರು ಸಹಿಸಲಿಲ್ಲ.

ಚನ್ನಪಟ್ಟಣದ ಜಗದೇವರಾಯ, ಕುಣಿಗಲ್, ದೊಡ್ಡಬಳ್ಳಾಪುರ, ಹೋಳವನಹಳ್ಳಿ, ಚಿಕ್ಕಬಳ್ಳಾಪುರದ ಪಾಳೇಗಾರರ ವಿರುದ್ಧ ಹೋರಾಡಿ ಸೋಲಿಸಿದನು.

- ಎಂ. ಮುನಿರಾಜಪ್ಪ, ಎಂ.ಎ.

**ದೊಡ್ಡವರ ಹೆಂಡತಿ ಎಲ್ಲರಿಗೂ ಅತ್ತೆ.**

# ಉಜ್ವಲ ಭವಿಷ್ಯದ ನೃತ್ಯ ಪ್ರತಿಭೆ ಕು॥ ಅಂಜಲಿ ಕುಂದಲಪಾಡಿ



ಮಕ್ಕಳಲ್ಲಿ ಹುದುಗಿರುವ ಪ್ರತಿಭೆಯನ್ನು ಎಳವೆಯಲ್ಲಿಯೇ ಗುರುತಿಸಿ ಪ್ರೋತ್ಸಾಹಿಸಿದರೆ ಅಂತಹ ಮಕ್ಕಳು ಬಹುಬೇಗ ಪ್ರಸಿದ್ಧಿಗೆ ಬರುತ್ತಾರೆ. ಅದಕ್ಕೊಂದು ಉದಾಹರಣೆ ಕು||ಅಂಜಲಿ ಕುಂದಲಪಾಡಿ. ದಿನಾಂಕ 26-10-2004 ರಂದು ಮಂಗಳೂರು ಪುರಭವನದಲ್ಲಿ ಭರತನಾಟ್ಯ ರಂಗಪ್ರವೇಶಿಸಿದ ಅಂಜಲಿ ತನ್ನ ಐದನೇ ವರ್ಷದಿಂದಲೇ ಮಂಗಳೂರಿನ ಪ್ರಸಿದ್ಧ ನೃತ್ಯ ಕೇಂದ್ರ 'ನಾಟ್ಯಾಲಯ ಉರ್ವ'ದ ನಿರ್ದೇಶಕಿ ವಿದುಷಿ ಶ್ರೀಮತಿ ಕಮಲಾಭಟ್‌ರವರಲ್ಲಿ, ಭರತ ನಾಟ್ಯ ಅಭ್ಯಾಸ ಮಾಡುತ್ತಿದ್ದು, ಕರ್ನಾಟಕ ಪ್ರೌಡ ಶಿಕ್ಷಕ ಪರೀಕ್ಷಾ ಮಂಡಳಿ ನಡೆಸುವ ಭರತನಾಟ್ಯ ಜೂನಿಯರ್ ಹಾಗೂ ಸೀನಿಯರ್ ಪರೀಕ್ಷೆಗಳಲ್ಲಿ ಉನ್ನತ ಶ್ರೇಣಿಯಲ್ಲಿ ಉತ್ತೀರ್ಣಳಾಗಿ, ಈಗ ವಿದ್ವತ್ ಪರೀಕ್ಷೆಯ ಸಿದ್ಧತೆಯಲ್ಲಿದ್ದಾಳೆ.

ಅಂದಿನ ರಂಗಪ್ರವೇಶದಲ್ಲಿ ಸಾಂಪ್ರದಾಯಿಕ ನೃತ್ಯ ಭಾಗ ಅಂಗಿಕಾಭಿನಯದ 'ಪುಷ್ಪಾಂಜಲಿ' ಯಲ್ಲಿ ವಿಘ್ನನಿವಾರಕನಾದ ಶ್ರೀ ವಿನಾಯಕನನ್ನು ಸ್ತುತಿಸಿ, ಆರಾಧಿಸುವ ಶಾಸ್ತ್ರೀಯ ನೃತ್ಯದೊಂದಿಗೆ ಕಾರ್ಯಕ್ರಮ ಪ್ರಾರಂಭ. ಭರತನಾಟ್ಯದ ಒಂದು ಬಗೆಯ ಪರಿಪೂರ್ಣ ಸ್ಥಿತಿಯನ್ನು ಕಾಣಬಹುದಾದ 'ವರ್ಣಂ' ಎರಡನೆಯ ನೃತ್ಯ. ತದನಂತರ ಆಡಿಸಿದಳು ಯಶೋಧಾ ಜಗದೋದ್ಧಾರನ ಪುರಂದರದಾಸರ ದೇವರನಾಮ, ಭಕ್ತಿ ಪ್ರಧಾನವಾದ ದೇವತಾ ಸ್ತುತಿಯ ಕೃತಿ ಶೃಂಗಾರ ರಸ ಪ್ರಧಾನವಾದ ಜಾವಳಿ ಹಾಗೂ ಭರತನಾಟ್ಯದ ವೈವಿಧ್ಯಮಯ ನಡೆಗಳನ್ನು ಆಕರ್ಷಕ ನೃತ್ಯ ಭಂಗಿಗಳನ್ನು ಚುರುಕಾದ ಪದವಿನ್ಯಾಸಗಳನ್ನು ಮಾಡುವ 'ತಿಲ್ಲಾನ' ದೊಂದಿಗೆ ಅಂಜಲಿಯ ಭರತನಾಟ್ಯ ರಂಗ ಪ್ರವೇಶ ಮುಕ್ತಾಯ.

ಒಟ್ಟಿನಲ್ಲಿ ಅಂಜಲಿ ತನ್ನ ಪದಗತಿಯಲ್ಲಿ ರಸ ಭಾವಾಭಿವ್ಯಕ್ತಿಯಲ್ಲಿ ಪ್ರತಿಭೆಯ ಭರವಸೆ ಮೂಡಿಸುವ ಕಲಾ ವಿದೆಯಾಗಿ ಮೆರೆದು, ಕಲಾಸಕ್ತರ ಮನಸೂರೆ ಗೊಳ್ಳುವುದರೊಂದಿಗೆ ಕಿವಿಗಡಚುವ ಚಪ್ಪಾಳೆಗಿಟ್ಟಿಸಿಕೊಂಡಳು.

ಅಂದು ಸಭಾ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಮೂಡಬಿದಿರೆ ಆಳ್ವಾಸ್ ಎಜುಕೇಶನ್ ಪೌಂಡೇಶನ್ನಿನ ಅಧ್ಯಕ್ಷ ಹಾಗೂ ಸ್ವಯಂ ಕಲಾವಿದರಾದ ಡಾ. ಎಂ. ಮೋಹನ ಆಳ್ವ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡವಿಭಾಗದ ಮುಖ್ಯಸ್ಥರಾದ ಡಾ. ಕೆ. ಚಿನ್ನಪ್ಪಗೌಡ ಹಾಗೂ ಕರ್ನಾಟಕ ಕಲಾತಿಲಕ ಉಳ್ಳಾಲ ಶ್ರೀ ಮೋಹನ್ ಕುಮಾರ್‌ರವರು ಪಾಲ್ಗೊಂಡಿದ್ದರು. ಕೊಡಗು ಜಿಲ್ಲಾ ಚೆಟ್ಟಳ್ಳಿ ಪ್ರೌಢಶಾಲಾ ನಿವೃತ್ತ ಮುಖ್ಯೋಪಾಧ್ಯಾಯರಾದ ಶ್ರೀ ಪಿ. ಜಿ. ಅಂಜಿಕಲ್ ಇವರು ಶುಭಾಶಂಸನೆ ಮಾಡಿದರು. ಚಿಕ್ಕ ಚೊಕ್ಕ ಸಭಾಕಾರ್ಯಕ್ರಮ ಕಲಾಸಕ್ತರಿಗೆ ಬೋರು ಹೊಡಿಸದೆ ಅಂಜಲಿಯ ಗುರುವಂದನೆಯೊಡನೆ ಮುಕ್ತಾಯ. ಬಹುಮುಖ ಪ್ರತಿಭೆಯ ಅಂಜಲಿ ಸಂಗೀತ ಜ್ಯೂನಿಯರ್ ಹಾಗೂ ಚಿತ್ರಕಲೆ ಹೈಯರ್ ಗ್ರೇಡ್ ಪರೀಕ್ಷೆಗಳಲ್ಲಿ ಪ್ರಥಮ ಶ್ರೇಣಿಯನ್ನು ಪಡೆದಿರುತ್ತಾಳೆ. ಯಾವತ್ತೂ ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ಉತ್ಸಾಹದಿಂದ ಭಾಗವಹಿಸುವ ಅಂಜಲಿ ಭಾಷಣ, ಪ್ರಬಂಧ, ಛದ್ಮವೇಷ, ಚಿತ್ರ, ನೃತ್ಯ, ಗೀತ ಕಂಠಪಾಠ ಇತ್ಯಾದಿಗಳಲ್ಲಿ ಭಾಗವಹಿಸಿ ಜಿಲ್ಲಾ ಮಟ್ಟದ ಮತ್ತು ರಾಜ್ಯ ಮಟ್ಟದ ಬಹುಮಾನಗಳನ್ನು ಗಳಿಸಿದ ಹೆಗ್ಗಳಿಕೆ ಈಕೆಯದು. ಮರಿ ಕವಯತ್ರಿಯಾದ ಈಕೆಯ ಕವನ, ಕಥೆ ಚಿತ್ರಗಳು ತುಷಾರ, ಪ್ರಜಾವಾಣಿ ಇತ್ಯಾದಿ ಪತ್ರಿಕೆಗಳಲ್ಲಿ ಬೆಳಕು ಕಂಡಿವೆ. ಉದಯವಾಣಿ ಬಳಗದ ಮಕ್ಕಳ ಮಾಸಿಕಕ್ಕೆ 'ತುಂತುರು' ಎಂದು ಹೆಸರು ಸೂಚಿಸಿದವರಲ್ಲಿ ಈಕೆ ಒಬ್ಬಳು. ಕಲಿಕೆಯಲ್ಲೂ ಸದಾ ಮುಂದಿರುವ ಅಂಜಲಿ ಏಳನೇ ತರಗತಿಯಲ್ಲಿ 96% ಅಂಕಗಳನ್ನು ಪಡೆದು ಅತ್ಯುನ್ನತ ಶ್ರೇಣಿಯಲ್ಲಿ ಉತ್ತೀರ್ಣಳಾದ ಪ್ರತಿಭಾವಂತೆ. ಎಸ್. ಎಸ್. ಎಲ್. ಸಿ. ಪ್ರಥಮ ಭಾಷೆ ಸಂಸ್ಕೃತದಲ್ಲಿ 125 ಕ್ಕೆ 124 ಅಂಕಗಳನ್ನು ಪಡೆದು ಉಡುಪಿಯ ಶ್ರೀ ಕೃಷ್ಣ ಮಠದಿಂದ ವಿಶೇಷ ಬಹುಮಾನವನ್ನು ತನ್ನ ಮುಡಿಗೇರಿಸಿಕೊಂಡ ಅಂಜಲಿ ಪ್ರಸಕ್ತ ಬೆಂಗಳೂರಿನ ಬಿ. ಎಂ. ಎಸ್. ಇಂಜಿನಿಯರಿಂಗ್ ಕಾಲೇಜಿನಲ್ಲಿ ತೃತೀಯ ವರ್ಷದ ತಾಂತ್ರಿಕ ಶಿಕ್ಷಣದ ವಿದ್ಯಾರ್ಥಿನಿ.

ಕೊಡಗು ಜಿಲ್ಲೆಯ ಮಡಿಕೇರಿ ತಾಲ್ಲೂಕು ಪೆರಾಜೆ ಗ್ರಾಮದ ಪ್ರತಿಷ್ಠಿತ ಗೌಡ ಮನೆತನವಾದ ಕುಂದಲಪಾಡಿಯ ಕುಡಿ ಕು. ಅಂಜಲಿ. ಈಕೆಯ ಸರ್ವತೋಮುಖ ಬೆಳವಣಿಗೆಯ ಹಿಂದೆ ತಂದೆ ಮಂಗಳೂರು ಕೆನರಾ ಪದವಿ ಕಾಲೇಜಿನ ದೈಹಿಕ ಶಿಕ್ಷಣ ನಿರ್ದೇಶಕರಾದ ಶ್ರೀ ಕುಂದಲಪಾಡಿ ಎಸ್. ದಾಮೋದರ, ತಾಯಿ ಮಂಗಳೂರು ಸರಕಾರಿ ಪ. ಪೂ. ಮಹಿಳಾ ಕಾಲೇಜಿನ ಇತಿಹಾಸ ಉಪನ್ಯಾಸಕಿ ಹಾಗೂ ಸಾಹಿತಿ ಶ್ರೀಮತಿ ಲೀಲಾ ದಾಮೋದರ ಇವರ ನಿರಂತರ ಪ್ರೋತ್ಸಾಹ ಒಂದೆಡೆಯಾದರೆ, ಶ್ರೀಮತಿ ಕಮಲಾ ಭಟ್‌ರವರ ಅನುಭವ ಹಾಗೂ ವಿಶೇಷ ಕಾಳಜಿ ಅಂಜಲಿಯ ನಾಟ್ಯ ಪ್ರತಿಭೆ ವಿಕಸನಗೊಳ್ಳುತ್ತಿರುವುದಕ್ಕೆ ಕಾರಣವಾಗಿದೆ. ಸತತ ತನ್ಮಯತೆಯ ಅಭ್ಯಾಸ ಮತ್ತು ಹೊಸತನದ ಅನ್ವೇಷಣೆಯಲ್ಲಿ ನಿರತವಾಗಿರುವ ಕು. ಅಂಜಲಿ ಮುಂಬರುವ ದಿನಗಳಲ್ಲಿ ಶ್ರೇಷ್ಠ ಕಲಾವಿದೆಯಾಗಿ ಮೂಡಿ ಬರಲಿ ಎಂದು ಹಾರೈಸೋಣ.

-ಪಿ. ಜಿ. ಅಂಬೆಕಲ್
ನಿವೃತ್ತ ಮುಖ್ಯೋಪಾಧ್ಯಾಯರು. ಕಲ್ಲೇಗ ದಿನಕರ
ನಿಲಯದ ಬಳಿ.ಅಂಚೆ ನೆಹರು ನಗರ, ಪುತ್ತೂರು ದ. ಕ.- 574 203

# ಬುದ್ಧಿಯ ಸ್ಥಿಮಿತ

ಮನುಷ್ಯನು ತನಗೆ ಸಂತೋಷ ಬೇಕೆಂದು ಸಂತೋಷವನ್ನು ಹುಡುಕಾಡುತ್ತಾನೆ. ಅದಕ್ಕಾಗಿ ಎಷ್ಟೋ ಗ್ರಂಥಗಳನ್ನು ಓದುತ್ತಾನೆ. ಸಾಧು ಸಂತರನ್ನು ಭೇಟಿ ಮಾಡುತ್ತಾರೆ. ಯಾಗ, ಯಜ್ಞ, ಪುಣ್ಯ ಕ್ಷೇತ್ರಗಳನ್ನು ಸಂಪರ್ಕಿಸುತ್ತಾನೆ. ಇಷ್ಟೆಲ್ಲಾ ಸಂಕಷ್ಟಗಳನ್ನು ಎದುರಿಸಿದರೂ ಶಾಂತಿ, ಸಂತೋಷ ದೊರಕದು. ಸಂತೋಷ ಹೊರಗಿನ ಪ್ರಪಂಚದಿಂದ ಲಭಿಸದು. ಖರೀದಿಸುವಂತಿಲ್ಲ. ತನ್ನಲ್ಲಿಯೇ ಇದೆ. ನಮ್ಮ ಜನನವೇ, ಜೀವವೇ ಸಂತೋಷ, ಸ್ಥಿಮಿತ ಬುದ್ಧಿಯೇ ಸಂತೋಷ.

ಇಡೀ ಭೂಮಂಡಲವೇ ಸತ್-ಚಿತ್-ಆನಂದ. ಅಸ್ತಿಕರು ಭೂಮಿ, ನೀರು, ಅಗ್ನಿ, ಗಾಳಿ ಮತ್ತು ಬೆಳಕು ಇವುಗಳೆಲ್ಲಾ ಭಗವಂತನ ಕೊಡುಗೆ ಎಂದು ನಂಬಿ ಅವುಗಳನ್ನು ಪೂಜಿಸುತ್ತಾರೆ. ಇವೆಲ್ಲಾ ನಮ್ಮ ಸಂತೋಷಕ್ಕಾಗಿ ದೇವರ ಕೊಡುಗೆ. ಅದೇ ನಮಗೆ ಸತ್ಯಂ, ಶಿವಂ, ಸುಂದರಂ ಎಂದು ನಂಬುತ್ತಾರೆ. ವಿಜ್ಞಾನಿಗಳು ಪ್ರತ್ಯಕ್ಷಕಂಡದ್ದನ್ನು ವಿವರಿಸುತ್ತಾರೆ. ವಿಜ್ಞಾನಿಗಳು ಸೃಷ್ಟಿಕರ್ತರಲ್ಲ. ಸೃಷ್ಟಿಯಲ್ಲಿರುವುದನ್ನು ವಿಚಾರಿಸಿ ತಿಳಿ ಹೇಳುತ್ತಾರೆ. ಅವರಿಗೆ ಎಟುಕರಿದುವುದನ್ನು ನೇಚುರಲ್ ಎನ್ನುತ್ತಾರೆ. ಆದರೆ ಆಸ್ತಿಕರು, ನಾಸ್ತಿಕರು, ವಿಜ್ಞಾನಿಗಳು ಸತ್ಯಶೋಧಕರು ಬೋಧನೆ ರೀತಿ ಬೇರೆ ಬೇರೆ ವಿವರಣೆ ಬೇರೆ ಬೇರೆ ಆಲೋಚನೆಯೂ ಬೇರೆ ಬೇರೆ. ಅವರೆಲ್ಲರೂ ತಲಪುವ ಸ್ಥಳ ಸತ್ಯದೆಡೆಗೆ ಆ ಸತ್ಯವೇ ದೇವರು ಎನ್ನುತ್ತಾರೆ ಸತ್ಯಾನ್ವೇಷಣೆಯವರು.

ಮೊಟ್ಟ ಮೊದಲು ನಮ್ಮನ್ನು ನಾವು ನಂಬಬೇಕು. ಸ್ವಂತ ಶಕ್ತಿ ಸಾಧನೆ ಬೆಳೆಸಿಕೊಳ್ಳಬೇಕು. (Self confidence and self respect) ಕಣ್ಣಿಗೆ ಕಾಣುವುದಕ್ಕೆ ಆಧಾರ ಕಣ್ಣಿಗೆ ಕಾಣಿಸದಿರುವುದು. ಒಬ್ಬ ಇಂಜಿನಿಯರ್ ಮನೆ ಕಟ್ಟುತ್ತಾನೆ. ಮನೆಗಿರುವ ಅಲಂಕಾರವೆಲ್ಲಾ ಮುಗಿದ ನಂತರ ನಾವು ಮನೆ ಎಷ್ಟು ಚೆನ್ನಾಗಿದೆ. ಎಷ್ಟು ಭದ್ರವಾಗಿದೆ ಎಂದೆಲ್ಲಾ ಮೆಚ್ಚಿಗೆ ವ್ಯಕ್ತಿಪಡಿಸುತ್ತೇವೆ. ಆದರೆ ಆಸುಂದರವಾದ ಮನೆಗೆ ಭದ್ರತೆಗೆ ಆಧಾರ ಮನೆಯ ಅಡಿಪಾಯ (Foundation) ಇದು ಕಣ್ಣಿಗೆ ಕಾಣಿಸದು. ಹಾಗೆಯೇ ಈ ಸುಂದರವಾದ ಜಗತ್ತು ನಿಂತಿರುವುದು ಭಗವಂತನ ಆಧಾರದಿಂದ. ಆಕರ್ಷಣ ಶಕ್ತಿಗೆ ಕಾರಣಕರ್ತರೊಬ್ಬರಿರುವರು. ನಾವೊಂದು ಒಳ್ಳೆ ಬಟ್ಟೆ ಧರಿಸುತ್ತೇವೆ. ಆ ಬಟ್ಟೆಯನ್ನು ವರ್ಣಿಸುತ್ತೇವೆ. ಆದರೆ ಆ ಬಟ್ಟೆ ಅಷ್ಟರ ಮಟ್ಟಿಗೆ ಬರಬೇಕಾದರೆ ಅದರ ತಯಾರಕರು ಯಾರೋ ಇರಲೇಬೇಕು. ಅವರು ಇದ್ದಾರೆ ಎಂದು ಗೊತ್ತು, ಆದರೆ ಅವರು ಇದ್ದೂ ಕಾಣಿಸರು.

ಈ ಆಧಾರದ ಮೇಲೆ ನಾವು ಕಾರ್ಯ ನಿರ್ವಹಿಸಬೇಕು. ಕಾರ್ಯಕ್ಕೆ ಕಾರಣ ಸ್ವಶಕ್ತಿ (Self Confidence) ಇದೇ ಕಾರ್ಯದ ಅಡಿಪಾಯ. ಗೌತಮ ಬುದ್ಧರವರು ಇದನ್ನೇ ಜನರಿಗೆ ಬೋಧಿಸಿದರು. ತ್ಯಾಗವೇ ಭೋಗಕ್ಕಿಂತ ಶ್ರೇಷ್ಠ ಎಂದು ತನ್ನ ಜೀವನವನ್ನು ಬದಲಿಸಿಕೊಂಡು ಇತರರಿಗೆ ಮಾರ್ಗದರ್ಶಮ ಮಾಡಿದರು. ಭೋಗ ಜೀವನ ರೋಗಕ್ಕೆ ಕಾರಣ. ತ್ಯಾಗ ಜೀವನ ಆತ್ಮ ತೃಪ್ತಿಗೆ ಕಾರಣ ಎಂದರು. ಅದಕ್ಕಾಗಿ ಗೌತನ ಬುದ್ಧರು ಮನವನ್ನು ತನ್ನ ಅಸ್ತ್ರವನ್ನಾಗಿ ಉಪಯೋಗಿಸಿದರು. "ಮೌನಂ ಪುರುಷ ಲಕ್ಷಣಂ" ಎಂಬುದು ಮೌನವಿದ್ದಷ್ಟು ಮೆದುಳು ಶಾಂತವಾಗಿರುವುದು ಮಾತಾಡಬಾರದೆಂದರ್ಥವಲ್ಲ. ಅವಶ್ಯಕ್ಕೆ ತಕ್ಕ ಮಾತು "ನುಡಿದರೆ ಮುತ್ತಿನ ಹಾರ' ದಂತಿರಬೇಕು. ಅದಕ್ಕೇ ಮಾತು ಕಡಿಮೆ, ಕಾರ್ಯ ಹೆಚ್ಚು ಎನ್ನುತ್ತಾರೆ. ಇಂಗ್ಲೀಷಿನಲ್ಲಿ Less talk-Moire work' ಎನ್ನುತ್ತಾರೆ. ಭಗವದ್ಗೀತೆಯಲ್ಲಿ "ಚಂಚಲಂ ಹಿ ಮನಃ ಪ್ರಮತಿ ಬಲವಥ್ಯಪರಿ ಮನಸ್ಸು ಚಂಚಲ ಆದರೆ ಅಷ್ಟೆ ದೃಡವಾದದ್ದು ಆದ್ದರಿಂದ ಮನಸ್ಸನ್ನು ಗಟ್ಟಿಯಾಗಿಟ್ಟುಕೊಳ್ಳಲು, ದೃಡವಾಗಿದರೆ ಇಂದ್ರಿಯಗಳು ಸ್ತಿಮಿತಕ್ಕೆ ಬರುವುದು.

ಇಂದಿನ ವಿದ್ಯೆ (ಜ್ಞಾನ) ಆದ್ಯಾತ್ಮಿಕವಲ್ಲ. ನಮ್ಮ ಮನಸ್ಸನ್ನು ಸಂಯುಕ್ತದಿಂದ ಚಂಚಲಕ್ಕೆ ಎಳೆಯುತ್ತಿದೆ. ಅದಕ್ಕೆ ಪೂರ್ಣ ಬೆಂಬಲ ಸಿನಿಮಾ, ಟಿ. ವಿ. ವೀಡಿಯೋ ಮತ್ತು ಕಂಪ್ಯೂಟರ್ ಅವು ಎಷ್ಟು ಒಳ್ಳೆಯದೋ ಅಷ್ಟೇ ಮನಸ್ಸಿಗೆ ಕಲುಷಿತ ಒಬ್ಬ ಹಣ ಗಳಿಸುತ್ತಾನೆ. ನೂರಾರು ಜನರು ನೆಮ್ಮದಿ ಕಳೆದುಕೊಳ್ಳುತ್ತಾರೆ. ಹಾಗಾಗಿ ನಾವಿಂದು ಥಳಕು ಜೀವನವನ್ನು ಮೈಗೂಡಿಸಿಕೊಂಡಿದ್ದೇವೆ. ನಮಗಿರುವ ಆಸೆ ಆಕಾಂಕ್ಷೆ ಎಷ್ಟೆಂದು ನಮಗೆ ಗೊತ್ತಿಲ್ಲ. ಹಾಗಾಗಿ ವಿಪರೀತ ಆಸೆ ನಮಗೆ ನಿರಾಸೆ ಕೊಡುತ್ತದೆ. ಗ್ರಾಮ ಪಂಚಾಯಿತಿಗೆ ಆರಿಸಿ ಬಂದರೆ ಅವನಿಗೆ ಜಿಲ್ಲಾ ಪಂಚಾಯಿತಿ ಬೇಕು , ರಾಜ್ಯ ಪದವಿ (ಮುಖ್ಯಮಂತ್ರಿ) ಬೇಕು, ಅನಂತರ ರಾಷ್ಟ್ರಪದವಿ (ಪ್ರಧಾನ ಮಂತ್ರಿ) ಹೀಗೆ ಬಯಕೆ ಏರುತ್ತಿರುತ್ತದೆ. ಜೀವನ ಕುಗ್ಗುತ್ತಿರುತ್ತದೆ.

ನಶ್ವರವಾದ ದೇಹವನ್ನು ಮೆಚ್ಚುತ್ತೇವೆ. ಇದು ನನ್ನ ಶರೀರ, ನನ್ನ ಬುದ್ಧಿ ನನ್ನ ಚಿತ್ತ, ನನ್ನ ಆಸ್ತಿ, ನನ್ನ ಮನೆ ಹೀಗೆ ನನ್ನ ನ್ನನ ಎಂಬ ನನ್ನ ತದಿಂದ ಅನ್ನ ಅನ್ನ ಎಂಬುದನಲು ಮರೆಯುತ್ತೇವೆ. ಈ ನನ್ನತನವನ್ನು ಮೆಚ್ಚಿಸಲು ಕ್ರೌರ್ಯ ಕಾರ್ಯಕ್ಕಿಳಿದು ಇದ್ದದ್ದನ್ನು ಕಳೆದುಕೊಳ್ಳುತ್ತೇವೆ. ರಾಮ (Rama) ಸ್ಮರಣೆ ಬಿಡುತ್ತೇವೆ. 'ರಂ' (Rum) ಸ್ಮರಣೆ ಮಾಡುತ್ತೇವೆ. ಬುದ್ಧಿಯ ಸ್ಥಿಮಿತ ಕಳೆದುಕೊಳ್ಳುತ್ತೇವೆ.

ನಾವು ಪರಕೀಯರ ಬಾಳಿಕೆಗೆ ಜೋತಿ ಬಿದ್ದಿದ್ದೇವೆ.

ಹಣಗಳಿಕೆ ಒಂದೇ ನಮ್ಮ ಧ್ಯೇಯ, ಅದಕ್ಕಾಗಿ ನಮ್ಮನ್ನು ಸಾಕಿ ಸಲಹಿದ ತಂದೆ ತಾಯಿಂದಿರನ್ನು ಕಡೆಗಣಿಸುತ್ತೇವೆ. ಆದರೆ ಒಂದು ನೆನಪಿನಲ್ಲಿಡಬೇಕು. (Every action has its own apposite re-action) ಪ್ರತಿ ಯೊಂದು ಕ್ರಿಯೆಗೆ, ಪರಿಣಾಮಕಾರಿ ಪ್ರತಿಕ್ರಿಯೆ ಇದ್ದೇ ಇದೆ. ಕೆಲವನ್ನು ಕಣದಲ್ಲೇ ಕಾಣಬಹುದು. ಕೆಲವನ್ನು ಬಹಳ ಸಮಯದ ನಂತರ ಕಾಣಬಹುದು.

ಬುದ್ಧಿಯ ಸ್ಥಿಮಿತ ಒಂದೇ ನಮ್ಮನ್ನು ನಾವು ಉದ್ಧರಿಸಿಕೊಳ್ಳುವ ಮಾರ್ಗ. ವೇದಾಂತದ ಸುವಾಖ್ಯ, ' Help ever, Hurt never' ಪವಿತ್ರ ಗ್ರಂಥಗಳು ಪರೋಪಕಾರ ಪುಣ್ಯ; ಪರಪೀಡನ ಪಾಪ ಎನ್ನುತ್ತದೆ. ನಮ್ಮ ದೇಹವೇ ಒಂದು ದೇವಾಲಯ, ಬುದ್ಧಿಯೇ ವಿಗ್ರಹ ಬುದ್ಧಿಯ ಸ್ಥಿಮಿತವೇ ಅರ್ಚನೆ. ದೇವರಿಗಾಗಿ ಹುಡುಕಬೇಕಾಗಿಲ್ಲ. ತಂದೆ ತಾಯಿಯೇ ಪ್ರತ್ಯಕ್ಷ ದೇವರು. ದೇವರ ಶಾಶ್ವತ ಸ್ಥಾನವೇ ನಮ್ಮ ಹೃದಯ. ಅದನ್ನು ಆತ್ಮ ಎನ್ನುತ್ತೇವೆ. ವಯಸ್ಸಾದವರು ಕಾಲ ಕಳೆಯಿತು ನವ ತರುಣ, ತರುಣಿಯರು ಮುಂದೆ ಜೀವಿಸಬೇಕು ಇತರರು ಜೀವಿಸಲು ಅನುವು ಮಾಡಬೇಕು. ಸತ್ಯ ಮತ್ತು ಪ್ರೀತಿ ಪ್ರೇಮವೇ ಬುದ್ಧಿಯ ಸ್ಥಿಮಿತಕ್ಕೆ ಸೋಪಾನ.

**ಚೆಂದ್ರಿಮಾಡ ಗ. ಮುತ್ತಪ್ಪ**
ಕುಶಾಲನಗರ

---

# ನನ್ನ ಮೆಚ್ಚಿನ ವ್ಯಕ್ತಿ : ಪೂಜಾರಿ ಮನೆ ದಿ॥ ರಾಮಪ್ಪನವರು.

ಈ ನನ್ನ ಲೇಖನದ ಶಿರೋನಾಮೆಯು 'ನನ್ನ ಮೆಚ್ಚಿನ ವ್ಯಕ್ತಿ' ಎಂದು ಕೊಟ್ಟಿರುವುದಕ್ಕೆ ಕಾರಣಗಳು ಇರಲು ಯಾ ಇಲ್ಲದಿರಲೂ ಬಹುದು. ಇದು ಬರೇ ನಾಟಕದಂತಿರುವ ಪ್ರಪಂಚ. ನಾಟಕರಂಗದಲ್ಲಿ ಒಬ್ಬ ಸಾಮಾನ್ಯ ಮನುಷ್ಯನು ಬ್ರಹ್ಮ ನಾಗಬಹುದು ಅಥವಾ ಯಮರಾಜನಾಗಬಹುದು. ಆದರೆ ನಾಟಕ ಮುಗಿದೊಡನೆ ಅವನು ಅವನೇ. ಅಂತೆಯೇ ಅದೆಷ್ಟೋ ಸಾಹಸ, ಸಾಮರ್ಥ್ಯಗಳನ್ನು ಮಾಡಿದ ಕೆಲವು ಮುಖ್ಯ ವ್ಯಕ್ತಿಗಳ ಇರವನ್ನೆ ಮರೆತು ನಿನ್ನೆಯ ಮಳೆಗೆ ಇಂದು ತಲೆ ಎತ್ತಿದ ಚಗ್ತೆಯಂತಿರುವ ಕೆಲವರ ಗುಣ ಸಂಪತ್ತನ್ನು ಹೊಗಳಿ ಕೊಂಡಾಡುವವರೆಷ್ಟು! ಅಂತವರ ಸ್ನೇಹವನ್ನು ಗಳಿಸುವ ಪ್ರಯತ್ನ ಅದರೊಡನೆ ಮಿಳಿತ. ಅವರವರ ಸುತ್ತಲೂ ಪ್ರದಕ್ಷಿಣೆ ಬರುವ ಮೂರ್ಖರೆಷ್ಟು ಮಂದಿ! ಇವೆಲ್ಲವುಗಳು ನಾವಿಂದು ಪ್ರತ್ಯಕ್ಷ ಕಣ್ಣಲ್ಲಿ ನೋಡುವ ದೃಶ್ಯಗಳು ಮತ್ತು ಈ ಕಲಿಯುಗದ ಮೂರ್ಖತನದ ಪರಮಾವಧಿ ಎಂದರೂ ತಪ್ಪಾಗಲಾರದು.

ನನ್ನ ನೆಚ್ಚಿನ ವ್ಯಕ್ತಿ ಯಾರೆಂದರೆ ಇವರೇ : ಖಾದಿ ಅಂಗಿಯ ಧರಿಸಿ, ಶಿರದಲ್ಲಿ ಸದಾ ಗಾಂಧಿ ಟೊಪ್ಪಿಯು ಶೋಭಿಸುತ್ತಿದ್ದ, ವಿಶಾಲವಾದ ಮುಖದಲ್ಲಿ ರಾಜ ಕಳೆಯನ್ನು ಎತ್ತಿ ತೋರುತ್ತಿದ್ದ ನೀಳವಾದ ಮತ್ತೆ ದಪ್ಪವಾದ ಮೂಗಿನಿಂದ ಗಂಭೀರವಾದ ವದನುಳ್ಳವರಾಗಿದ್ದ ದಿವಂಗತ ಪೂಜಾರಿ ಮನೆ ರಾಮಪ್ಪನವರು. ನಾನು ಆರಿಸಿಕೊಂಡ ಲೇಖನದ ಮುಖ್ಯ ವ್ಯಕ್ತಿಗಳು. ಇಂತಹ ಮಹಾ ಪುರುಷರ ಶಕ್ತಿ ಸಾಮರ್ಥ್ಯ ಅವಿಚ್ಛಿನ್ನ ದೇಶಭಕ್ತಿ ಮತ್ತು ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿದ ಅವರ ಅಭಯಂಕರ ಚರಿತ್ರೆಯನ್ನು ಇಂದು ಮಣ್ಣು ಪಾಲಾಗಿ ಮಾಡಿ ಅವರನ್ನು ಪೂರ್ಣವಾಗಿ ಮರೆತಂತಿದೆ. ಇಂದು ನಮ್ಮ ನಾಡಿನ ಜನಾಂಗ. ದಿವಂಗತರು ಪೂಜಾರಿ ಮನೆ ಕುಟುಂಬದಲ್ಲಿ ಜನಿಸಿ ತಮ್ಮ ಇಡೀ ಜೀವನವನ್ನೇ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಧಾರೆಯೆರೆದು ತಮ್ಮ ಜೀವನದ ಅಂತ್ಯವನ್ನು ಮುಟ್ಟಿದರು. ಮಡಿಕೇರಿ ಕೋಟೆಯಲ್ಲಿ ರಾರಾಜಿಸುತ್ತಿದ್ದ ಬ್ರಿಟಿಷ್ ಧ್ವಜವನ್ನು ಕಿತ್ತು ಬಿಸಾಡಿದ ಏಕೈಕ ಕೊಡಗಿನ ವೀರ. ಇಂತಹವರನ್ನು ನಾಡು ಮರೆತಿದೆಯೆಂದರೆ ನಮ್ಮ ದೌರ್ಭಾಗ್ಯವೇ ಸರಿ.

ಇವರು ಕಾಂಗ್ರೆಸ್ಸನ್ನು ಸೇರಿ ಅನೇಕ ಮುಖ್ಯ ಕೆಲಸಗಳನ್ನು ಕಠಿಣ ಪರಿಸ್ಥಿತಿಯಲ್ಲಿ ಮಾಡಿದರು. ಅವರಿಗೆ ಒಳ್ಳೆಯ ಭವಿಷ್ಯವನ್ನು ನೋಡುವ ಸುಯೋಗದ ಶೇಖರಿಸಿದ ನಿಧಿಯಂತಿದ್ದರೂ ಅದನ್ನು ಪಡೆಯುವ ಯೋಗವು ಇಲ್ಲದಾಯಿತು. ತಾನೊಂದು ನೆನೆದೊಡೇ ದೇವತೆ ಬೇರೊಂದು ನೆನೆವುದು. ಶ್ರೀ ರಾಮಪ್ಪನವರ ಕನಸು ನೆನಸಾಗಲಿಲ್ಲ. ಬದಲಾಗಿ ಅವರಿಗೆ ದೇವರು ಅನ್ಯಾಯವನ್ನು ಮಾಡಿದರು ಎಂಬಂತೆ ಅವರ ಅಂತ್ಯಕಾಲದಲ್ಲಿ ಅವರಿಗೆ ಸಾಕಷ್ಟು ಕಷ್ಟ ಪರಂಪರೆಗಳು ಬಂದೊದಗಿ ಪರಂಧಾಮವಗೈದರು.

ಪ್ರಬಲ ಬ್ರಿಟಿಷ್ ಸರಕಾರವನ್ನು ಎದುರಿಸಿ ನಿಲ್ಲುವ ಕಾರ್ಯ ಅಷ್ಟು ಸುಲಭವಾಗಿರಲಿಲ್ಲ ಅಂದು. ಏಕೆಂದರೆ ಇಂಗ್ಲಿಷರಿಗೆ ಭಾರತದ ಜನರ ದೃಢ ನಿಶ್ಚಯ ಆದಾಗಲೇ ಅವರಿಗೆ ಮನಗಂಡ ವಿಷಯವಾಗಿತ್ತು. ಜನರು ಎಚ್ಚೆತ್ತು ಸ್ವಾತಂತ್ರ್ಯದ ಹೋರಾಟದಲ್ಲಿ ಧುಮುಕಿದ ವಿಷಯವು ಬ್ರಿಟಿಷರಿಗೆ ಚೆನ್ನಾಗಿ ತಿಳಿದಿದ್ದುದರಿಂದ ಅವರು ಸರಕಾರವನ್ನು ಇನ್ನು ಬಿಗಿಗೊಳಿಸಿ ಸ್ವಾತಂತ್ರ್ಯಕ್ಕೆ ಹೋರಾಡುವ ಹಿಂದೂ ದೇಶದ ಎಲ್ಲಾ ಜನರನ್ನು ಬಹಳ ಕಠಿಣ ರೀತಿಯಲ್ಲಿ ಶಿಕ್ಷಿಸುತ್ತಿದ್ದರು. ಇಂತಹ ಕಾಲದಲ್ಲಿ ಶ್ರೀ ರಾಮಪ್ಪನವರು ಕೊಡಗಿನಲ್ಲಿ ಸಕ್ರಿಯ ಚಳುವಳಿಯಲ್ಲಿ ಭಾಗವಹಿಸಿ ತಮ್ಮ ದೇಶ ಸೇವೆಯನ್ನು ಸಲ್ಲಿಸಿರುವುದು ಬಹಳ ಗಮನಾರ್ಹ ವಾದ ವಿಷಯವಾಗಿದೆ.ಸ್ವಾತಂತ್ರ್ಯ ನಂತರ ದಿವಂಗತರನ್ನು ಸರ್ಕಾರ ಸನ್ಮಾನಿಸಿದಿದ್ದದ್ದು.

- ಲೇಖನ ದಿ. ಕೂಡಕಂಡಿರ ಪೊನ್ನಪ್ಪ, ವಕೀಲರು

---

ನೆರೆಮನೆ ಶ್ಯಾವಿಗೆಗೆ ಕಾಯಿ ಹಾಲು ಕಾಯಿಸಿದಂಗೆ

# ವಿದ್ಯುತ್ ಬಲ್ಬ್‌ನಲ್ಲಿ ಬೆಳಕು ಹೇಗೆ ಉಂಟಾಗುತ್ತದೆ ?



ಕತ್ತಲ ಕೋಣೆಯೊಂದರಲ್ಲಿ ಸ್ವಿಚ್ ಒತ್ತಿದಾಕ್ಷಣ, ಬಲ್ಬ್ ಹತ್ತಿಕೊಂಡು, ಕೋಣೆಯಲ್ಲಿ ಬೆಳಕು ಆವರಿಸುತ್ತದೆ. ಆಗ ಅಲ್ಲಿರುವ ವಸ್ತುಗಳನ್ನು ನಾವು ಸ್ಪಷ್ಟವಾಗಿ ನೋಡುತ್ತೇವೆ.

1878ನೇ ವರ್ಷದಲ್ಲಿ ಅಮೆರಿಕಾದ ವಿಜ್ಞಾನಿ ಥಾಮಸ್ ಎಡಿಸನ್ ವಿಶ್ವದ ಮೊಟ್ಟಮೊದಲ ಎಲೆಕ್ಟ್ರಿಕ್ ಬಲ್ಬ್ ಅನ್ನು ತಯಾರಿಸಿದ. ತಂತಿಯ ಮೂಲಕ ವಿದ್ಯುಚ್ಛಕ್ತಿ ಹರಿದಾಗ, ಬೆಳಕು ಮತ್ತು ಶಾಖ ಎರಡೂ ಉತ್ಪತ್ತಿಯಾಗುತ್ತದೆ ಎನ್ನುವ ತತ್ವದ ಆಧಾರದ ಮೇಲೆ ಅವನು ಈ ಬಲ್ಬ್ ಅನ್ನು ತಯಾರಿಸಿದ. ನಿಜವಾಗಿ, ಎಲೆಕ್ಟ್ರಿಕ್ ಬಲ್ಬ್ ವಿದ್ಯುತ್ತಿನ ಶಕ್ತಿಯನ್ನು ಶಾಖ ಮತ್ತು ಬೆಳಕಾಗಿ ಪರಿವರ್ತಿಸುತ್ತದೆ. ಇಂತಹ ಬಲ್ಬ್‌ಗಳನ್ನು ಸಾಮಾನ್ಯವಾಗಿ 'ಇನ್‌ಕ್ಯಾಂಡೆಸೆಂಟ್ ಲ್ಯಾಂಪ್ಸ್' (Incandescent Lamps) ಎನ್ನುವರು. ಎಡಿಸನ್, ಮೊದಲು ಗಾಜಿನ ಬಲ್ಬ್ ಒಂದರೊಳಗೆ ಅತಿ ತೆಳುವಾದ ಪ್ಲಾಟಿನಂ ತಂತಿಯಿಂದ ಮಾಡಿದ ಕಾಯಿಲ್ ಒಂದನ್ನು ಇಟ್ಟು ಸೀಲ್ ಮಾಡಿದ. ಈ ಕಾಯಿಲ್‌ನ (Coil) ಎರಡು ತುದಿಗಳನ್ನು ಸೇರಿಸಿ, ಅದಕ್ಕೆ ವಿದ್ಯುತ್ ಹರಿಸಿದಾಗ, ಆ ಕಾಯಿಲ್ ಕೆಂಪಗೆ ಕಾದು, ಹೊಳೆಯತೊಡಗಿತು. ಆದರೆ ಎಡಿಸನ್ ಮಾಡಿದ ಬಲ್ಬ್‌ಗಳು ಜನಪ್ರಿಯವಾಗಲಿಲ್ಲ. ಏಕೆಂದರೆ, ಬಲ್ಬ್‌ನೊಳಗಿನ ಪ್ಲಾಟಿನಂ ತಂತಿಗಳು ತುಂಬ ದುಬಾರಿಯಾಗಿ ಇದ್ದವು.

ಕಾಲಕ್ರಮೇಣ ಎಲೆಕ್ಟ್ರಿಕ್ ಬಲ್ಬ್‌ನಲ್ಲಿ ಉಪಯೋಗಿಸುವ ಫಿಲಮೆಂಟ್ ಸಾಮಗ್ರಿಗಳಲ್ಲಿ (Filament Materials)ಅನೇಕ ಬದಲಾವಣೆಗಳನ್ನು ಮಾಡಲಾಯಿತು. ಸ್ವಲ್ಪ ಕಾಲ ಕಾರ್ಬನ್-ಫಿಲಮೆಂಟ್‌ಗಳನ್ನು (Carbon Filaments) ಬಳಸಲಾಯಿತು. ಅನಂತರ ಟಂಗ್‌ಸ್ಟನ್ (Tungsten) ಮತ್ತು ಟ್ಯಾಂಟಲು (Tantalum) ಲೋಹಗಳಿಂದ ಮಾಡಿದ ಫಿಲಮೆಂಟ್‌ಗಳು ಬಳಕೆಗೆ ಬಂದವು. ಈ ಲೋಹಗಳು ಅತ್ಯಧಿಕ ಉಷ್ಣಾಂಶದಲ್ಲಿ ಮಾತ್ರ ಕರಗುವುದರಿಂದ, ಇವುಗಳಿಂದ ಮಾಡಿದ ಫಿಲಮೆಂಟ್‌ಗಳು ಸುಲಭವಾಗಿ ಹಾಳಾಗುವುದಿಲ್ಲ.

ಆಧುನಿಕ ಬಲ್ಬ್ ಈ ರೀತಿ ಇರುತ್ತದೆ. ಗಾಜಿನ ಬುರುಡೆಯೊಂದರೊಳಗೆ, ಸುರುಳಿ ಸುತ್ತಿದ ಫಿಲಮೆಂಟ್ ಅನ್ನು ಇಟ್ಟು ಸೀಲ್ ಮಾಡಲಾಗುತ್ತದೆ. ಈ ಫಿಲಮೆಂಟ್‌ನ ಎರಡೂ ತುದಿಗಳನ್ನು ದಪ್ಪನೆಯ ಎರಡು ತಂತುಗಳಿಗೆ ಬೆಸೆಯಲಾಗುತ್ತದೆ. ಈ ದಪ್ಪನೆಯ ತಂತಿಗಳು ಗಾಜಿನ ನಳಿಕೆಯೊಂದರ ಮೂಲಕ ಹಾದು ಬರುತ್ತದೆ. ಈ ತಂತಿಗಳ ಎರಡೂ ತುದಿಗಳನ್ನು ಕಾಂಟ್ಯಾಕ್ಟ್ ಪ್ಯಾಡ್‌ಗಳೊಂದಿಗೆ ಬೆಸುಗೆ ಹಾಕಲಾಗುತ್ತದೆ. ಈ ಎರಡು ತಂತಿಗಳು ಒಂದಕ್ಕೊಂದು ತಗುಲದಂತೆ ಮಾಡಲು ಲೋಹದ ಕ್ಯಾಪ್ ಅನ್ನು (Metal cap) ವಿದ್ಯುತ್ ನಿರೋಧಕ ಸಾಮಗ್ರಿಗಳಿಂದ ತುಂಬಿಸಲಾಗುತ್ತದೆ. ಈ ಗಾಜಿನ ಬಲ್ಬ್ ಅನ್ನು ನಿರ್ವಾತಗೊಳಿಸಿ, ಅದರೊಳಗೆ ನೈಟ್ರೋಜನ್ ಮತ್ತು ಆರ್ಗಾನ್ ಅನಿಲಗಳ ಮಿಶ್ರಣವನ್ನು ತುಂಬಿಸಲಾಗುತ್ತದೆ. ಹೀಗೆ ಮಾಡುವುದರಿಂದ ಫಿಲಮೆಟ್‌ನಿಂದ ಲೋಹ ಆವಿಯಾಗುವುದನ್ನು ಮತ್ತು ಕರಗಿಹೋಗುವುದನ್ನು ತಪ್ಪಿಸಿದಂತಾಗುತ್ತದೆ. ಈ ಅನಿಲಗಳ ಮಿಶ್ರಣ ಬಲ್ಬ್‌ನ ಕಾರ್ಯದಕ್ಷತೆಯನ್ನು ಹೆಚ್ಚಿಸುತ್ತದೆ. ಈ ಫಿಲಮೆಂಟ್‌ನಲ್ಲಿ ವಿದ್ಯುಚ್ಛಕ್ತಿ ಹರಿದಾಗ ಅದು, ಕಾದು ಮೊದಲು ಕೆಂಪಾಗಿ, ಅನಂತರ ಬೆಳ್ಳಗಾಗುತ್ತದೆ. ಹೊಳೆಯುವ ಈ ಬಿಳಿ ಫಿಲಮೆಂಟ್ ನಮಗೆ ಪ್ರಕಾಶ ಕೊಡುತ್ತದೆ.

ಬಲ್ಬ್ ಅನ್ನು ಒಯ್ಯುವಾಗ ಜಾಗ್ರತೆ ವಹಿಸಬೇಕು. ಸ್ವಲ್ಪ ಅಲ್ಲಾಡಿದರೂ ಫಿಲಮೆಂಟ್ ಹೋಗಬಹುದು. ಫಿಲಮೆಂಟ್ ನಾಶವಾದರೆ ಆ ಬಲ್ಬ್‌ನಿಂದ ಪ್ರಯೋಜನವಿಲ್ಲ. ಹೋಲ್ಡರ್‌ಗೆ ಬಲ್ಬ್ ಅನ್ನು ಹಾಕುವಾಗ ಅದರ ಸ್ವಿಚ್ ಅನ್ನು ಆರಿಸಿರಬೇಕು. ವಿದ್ಯುತ್ ಷಾಕ್ ಅನ್ನು ತಪ್ಪಿಸುವುದಕ್ಕಾಗಿ ಇಂತಹ ಕ್ರಮ ಕೈಗೊಳ್ಳಬೇಕು.

ಪಾಪಿ ಸಮುದ್ರಕ್ಕೆ ಹೋದರೂ ಮೊಣಕಾಲುದ್ದ ನೀರು

# ವಾಣಿಜ್ಯ ಪರ್ಯಾಯ ಬೆಳೆ ಪಚೋಲಿ

ಪಚೋಲಿ ಮೂಲತಃ ಫಿಲಿಫೈನ್ಸ್ ದೇಶದಾಗಿದ್ದು. ಉಷ್ಣವಲಯದ ಬಹುವಾರ್ಷಿಕ ಲೇಬಿಯೇಟ್ ಕುಟುಂಬಕ್ಕೆ ಸೇರಿದ ಸುಗಂಧ ದ್ರವ್ಯ ಬೆಳೆ. ಇದರ ಎಲೆಗಳಿಂದ ಸುಗಂಧ ತೈಲವನ್ನು ತೆಗೆಯಲು ಬೆಳೆಯಲಾಗುತ್ತಿದೆ. ಪಚೋಲಿಯನ್ನು ಏಕ ಬೆಳೆ ಅಥವಾ ಮಿಶ್ರ ಬೆಳೆಯಾಗಿ ಅಡಿಕೆ, ತೆಂಗು, ರಬ್ಬರ್ ಕಾಫಿ ಮತ್ತು ಬಾಳೆ ತೋಟಗಳಲ್ಲಿ ಬೆಳೆಯುತ್ತಾರೆ. ಪಚೋಲಿಯಲ್ಲಿ ಮುಖ್ಯವಾಗಿ ಮೂರು ತಳಿಗಳಿವೆ. ಅವುಗಳೆಂದರೆ, ಇಂಡೋನೇಶಿಯ, ಜೋಹೋರ್ ಹಾಗೂ ಸಿಂಗಾಪೂರ್. ಇವುಗಳಲ್ಲಿ ಜೋಹೋರ್ ಬಗೆಯು ಹೆಚ್ಚು ಪರಿಮಳಯುಕ್ತ ತೈಲವನ್ನು ಕೊಡುವುದರಿಂದ ಇದನ್ನು ವಾಣಿಜ್ಯ ಬೆಳೆಯಾಗಿ ಬೆಳೆಯಲಾಗುತ್ತಿದೆ. ಸುಗಂಧ ತೈಲವನ್ನು ಒಣಗಿಸಿದ ಪಚೋಲಿ ಎಲೆಗಳಿಂದ ಪಡೆದು, ಸಾಬೂನು, ಅಗರಬತ್ತಿ, ಬಟ್ಟೆಗೆ ಪರಿಮಳ ಬರುವಂತೆ ಮಾಡಲು, ಶೇವಿಂಗ್ ಕ್ರೀಮ್, ಔಷಧಿಗಳು ಮತ್ತು ಇತರೆ ಸುಗಂಧ ವಸ್ತುಗಳ ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ.

ವಿಶ್ವದಲ್ಲಿ ಸುಮಾರು 700-800 ಟನ್‌ಗಳಷ್ಟು ಉತ್ಪಾದನೆಯಾಗುತ್ತಿದ್ದರೂ ಭಾರತದಲ್ಲಿ ಪೆಟ್ರೋಲ್ ತೈಲದ ಉತ್ಪಾದನೆ ವರ್ಷಕ್ಕೆ ಕೇವಲ 100-150 ಟನ್ ಮಾತ್ರ. ಇಂಡೋನೇಷ್ಯಾ, ಮಲೇಶಿಯಾ ಮತ್ತು ಸಿಂಗಾಪೂರಗಳಿಂದ ವಾರ್ಷಿಕ 20 ಟನ್‌ಗಳಷ್ಟು ತೈಲವನ್ನು ಆಮದು ಮಾಡಿಕೊಳ್ಳಲಾಗುತ್ತಿದೆ. ಮುಖ್ಯವಾಗಿ ಪಶ್ಚಿಮ ಬಂಗಾಳ, ಅಸ್ಸಾಂ, ಕರ್ನಾಟಕ ಮತ್ತು ದಕ್ಷಿಣ ಭಾರತದ ಕರಾವಳಿ ತೀರಗಳಲ್ಲಿ ಬೆಳೆಯಲಾಗುತ್ತಿದೆ. ಇತ್ತೀಚಿನ ವರ್ಷಗಳಲ್ಲಿ ಹಲವು ಕಂಪನಿಗಳು ಒಣಗಿಸಿದ ಎಲೆಗಳನ್ನುಕೊಂಡುಕೊಳ್ಳುವ ಒಪ್ಪಂದವನ್ನು ಮಾಡಿಕೊಂಡಿರುತ್ತಾರೆ. ಆದುದರಿಂದ ರೈತರು ಈ ಬೆಳೆಯನ್ನು ಕೈಗೊಳ್ಳುವ ಮೊದಲು ಇಂತಹ ಒಪ್ಪಂದಗಳಿಗೆ ಒಳಪಟ್ಟಲ್ಲಿ ಮಾರು ಕಟ್ಟೆಗೆ ಯಾವುದೇ ತೊಂದರೆ ಇರುವುದಿಲ್ಲ.

### *ಹವಾಗುಣ ಮತ್ತು ಮಣ್ಣು*

ಉಷ್ಣ ಹಾಗೂ ಆರ್ದ್ರ ಹವೆಯಲ್ಲದೆ ಮೇಲಿಂದ ಮೇಲೆ ಮಳೆ ಬೀಳುತ್ತಿರುವ ವಾತಾವರಣವನ್ನು ಪಚೋಲಿ ಬಯಸುತ್ತದೆ. ವಾರ್ಷಿಕ 150-300 ಸೆ. ಮೀ. ಮಳೆಯಾಗುವ ಪ್ರದೇಶ, 24-28 ಡಿಗ್ರಿ ಸೆಲ್ಸಿಯಸ್ ಉಷ್ಣತೆ ಹಾಗೂ ಸಮುದ್ರಮಟ್ಟದಿಂದ 1000 ಮೀ. ಎತ್ತರದವರೆಗೆ ಚೆನ್ನಾಗಿ ಬೆಳೆಯುತ್ತದೆ.

ಶೇ. 20-30 ರಷ್ಟು ನೆರಳು ಇದ್ದಲ್ಲಿ ಇದರ ಬೆಳವಣಿಗೆ ಉತ್ತಮವಾಗಿರುತ್ತದೆ. ಇದನ್ನು ಬಹು ವಿಧದ ಮಣ್ಣುಗಳಲ್ಲಿ ಬೆಳೆಯಬಹುದಾಗಿದ್ದರೂ, ಸಾವಯವ ಪದಾರ್ಥಗಳು ಹೆಚ್ಚಾಗಿರುವ ಮರಳು ಮಿಶ್ರಿತ ಕೆಂಪು ಮಣ್ಣು ಪ್ರದೇಶ ಉತ್ತಮ.

### *ಸಸ್ಯಾಭಿವೃದ್ಧಿ ಮತ್ತು ನಾಟಿ ಮಾಡುವುದು.*

ಪಚೋಲಿ ಬೀಜ ಬಿತ್ತನೆ ಮಾಡಿ ಅಥವಾ ಕಾಂಡದ ತುಂಡುಗಳಿಂದ ಸಸ್ಯಾಭಿವೃದ್ಧಿ ಮಾಡುತ್ತಾರೆ. ಬೀಜ ಬಿತ್ತಿ ಬೆಳೆಸಿದರೆ ಬೆಳೆಯಲ್ಲಿ ಬಹಳಷ್ಟು ವ್ಯತ್ಯಾಸ ಕಂಡು ಬರುವುದರಿಂದ ಕಾಂಡದ ತುಂಡುಗಳನ್ನು ಬಳಸುವುದೇ ಒಳ್ಳೆಯದು. ಸುಮಾರು 8-9 ತಿಂಗಳ ವಯಸ್ಸಿನ ಕಾಂಡಗಳನ್ನು ಕತ್ತರಿಸಿ ತೆಗೆದು, 20 ಸೆಂ. ಮೀ. ಉದ್ದವಿರುವಂತೆ (4-5 ಗೆಣ್ಣು) ತುಂಡುಗಳನ್ನಾಗಿ ಮಾಡಿ, ನಂತರ ನೇರವಾಗಿ ಸಿದ್ಧಗೊಳಿಸಿದ ಜಮೀನಿನಲ್ಲಿ ನಾಟಿ ಮಾಡಬಹುದು. ಅಥವಾ ಸಸಿ ಮಡಿಗಳಲ್ಲಿ 10 ಸೆಂ. ಮೀ. ಅಂತರದಲ್ಲಿ ನಾಟಿ ಮಾಡಿ (ತುಂಡುಗಳ ಬುಡ ಭಾಗಗಳನ್ನು 1500 ಪಿ. ಪಿ. ಎಂ. ಇಂಡೋಲ್ ಬ್ಯುಟ್ರಿಕ್ ಆಮ್ಲದಲ್ಲಿ ನೆನೆಸಿ) ಸುಮಾರು 8-10 ವಾರಗಳ ನಂತರ ಕಿತ್ತು ನಾಟಿ ಮಾಡಬಹುದು.

### *ಭೂಮಿ ಸಿದ್ಧತೆ ಹಾಗೂ ಗೊಬ್ಬರಗಳ ನಿರ್ವಹಣೆ*

ಭೂಮಿಯನ್ನು ಉಳುಮೆ ಮಾಡಿ ಚೆನ್ನಾಗಿ ಹದ ಮಾಡಬೇಕು. ಚೆನ್ನಾಗಿ ಕಳಿತ ಕೊಟ್ಟಿಗೆ ಗೊಬ್ಬರವನ್ನು ಎಕರೆಗೆ 5 ಟನ್ ನಷ್ಟು ಮತ್ತು 8 ಕಿ. ಗ್ರಾಂ. ಫ್ಯೂರಡಾನ್ ಹರಳುಗಳನ್ನು ಮಣ್ಣಿನಲ್ಲಿ ಬೆರೆಸಬೇಕು. ಬದು ಮತ್ತು ಕಾಲುವೆಗಳನ್ನು 60 ಸೆಂ. ಮೀ. ಅಂತರದಲ್ಲಿ ತೆಗೆಯಬೇಕು. ಬದುವಿನ ಒಂದು ಬದಿಯಲ್ಲಿ 60 ಸೆಂ. ಮೀ. ಅಂತರದಲ್ಲಿ ಕಾಂಡದ ತುಂಡುಗಳನ್ನು ನೆಡಬೇಕು. ಎಕರೆಗೆ ಸುಮಾರು 11,111 ತುಂಡುಗಳು ಬೇಕಾಗುತ್ತವೆ. ನಾಟಿ ಮಾಡುವ ಸಮಯದಲ್ಲಿ ಮಣ್ಣು ಹಸಿರಾಗಿರಬೇಕು. ನಾಟಿಗೆ ಆಗಸ್ಟ್‌ನಿಂದ ಅಕ್ಟೋಬರ್ ಅವಧಿ ಸೂಕ್ತ. ನಾಟಿ ಮಾಡುವಾಗ 30ಕಿ. ಗ್ರಾಂ. ಸಾರಜನಕ, 20 ಕಿ. ಗ್ರಾಮ ರಂಜಕ ಮತ್ತು 20 ಕಿ. ಗ್ರಾಮ ಪೊಟ್ಯಾಸ್ ಒದಗಿಸುವ ರಸ ಗೊಬ್ಬರಗಳನ್ನು ಸಾಲುಗಳಲ್ಲಿ ಕೊಟ್ಟು ಮಣ್ಣಿನಲ್ಲಿ ಚೆನ್ನಾಗಿ ಬೆರೆಸಬೇಕು. ಮೇಲು ಗೊಬ್ಬರವಾಗಿ 30 ಕಿ. ಗ್ರಾಂ ಸಾರಜನಕವನ್ನು 3-4 ಸಮ ಕಂತುಗಳಲ್ಲಿ ಪ್ರತಿ ಕೊಯ್ಲು ನಂತರ ಕೊಡುವುದು ಉತ್ತಮ. ಮ್ಯಾಂಗನೀಸ್ ಲಘು ಪೋಷಕಾಂಶದ ಕೊರತೆ ಕಂಡು ಬಂದರೆ ಎಕರೆಗೆ 2-4 ಕಿ. ಗ್ರಾಂ. ಮ್ಯಾಂಗನೀಸ್ ಸಲ್ಫೇಟನ್ನು ಬೆಳೆಗಳಿಗೆ ಸಿಂಪಡಿಸಬೇಕು. ನಾಟಿ ಮಾಡಿದ ಒಂದೆರಡು ವಾರಗಳ ನಂತರ ಗಿಡಗಳ ಬುಡಕ್ಕೆ ಮಣ್ಣು ಏರಿಸಬೇಕು.

### *ನೀರಾವರಿ ಮತ್ತು ಕಳೆ ನಿರ್ವಹಣೆ*

ನಾಟಿಯಾದ 2-3 ದಿನಗಳವರೆಗೆ ಪ್ರತಿ ದಿನ ನೀರು ಕೊಡಬೇಕು. ನಂತರದ ದಿನಗಳಲ್ಲಿ ವಾರಕ್ಕೊಮ್ಮೆ ನೀರು ಹಾಯಿಸುವುದು ಅಗತ್ಯ. ನಾಟಿ ಮಾಡಿದ ಮೊದಲ 2-3 ತಿಂಗಳವರೆಗೆ ಕಳೆಗಳ ಬಾಧೆ ಹೆಚ್ಚಾಗಿರುತ್ತದೆ. ಇವುಗಳ

ಹತೋಟಿಗಾಗಿ ಎಕರೆಗೆ 1.0 ಕಿ. ಗ್ರಾಂ. ಡೆಯೂರಾನ್ ಅಥವಾ ಸಿಮೆಜಿನ್ ಬಳಸಬಹುದು.

***ಸಸ್ಯ ಸಂರಕ್ಷಣೆ***

ಪಟೋಲಿ ಬೆಳೆಯಲ್ಲಿ ಮುಖ್ಯವಾಗಿ ಬೇರುಗಳಲ್ಲಿ ಕಂಡುಬರುವ ದುಂಡು ಜಂತುಗಳು ಕಾಣಿಸಿಕೊಳ್ಳುತ್ತವೆ. ಇವು ಬೇರುಗಳಲ್ಲಿ ಗಾಯ ಮಾಡಿ ಬೆಳೆಗಳ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತವೆ. ಇವುಗಳ ಹತೋಟಿಗೆ ಎಕರೆಗೆ 8.0 ಕಿ. ಗ್ರಾಂ ಫ್ಯೂರಡಾನ್ ಹರಳುಗಳು, 1.5/2.0 ಟನ್ ಬೇವು ಅಥವಾ ಹೊಂಗೆ ಹಿಂಡಿಯನ್ನು ನಾಟಿ ಮಾಡುವ ಮುನ್ನ ಮಣ್ಣಿಗೆ ಸೇರಿಸಬೇಕು. ಸೂಕ್ತ ಬೆಳೆ ಪರಿವರ್ತನೆ ಹಾಗೂ ಬೆಳೆಗಳ ಸಾಲುಗಳ ನಡುವೆ ಚೆಂಡು ಹೂವಿನ ಗಿಡಗಳನ್ನು ಬೆಳೆಸುವುದರಿಂದ ಇವುಗಳನ್ನು ನಿಯಂತ್ರಿಸಬಹುದು.

ಎಲೆ ಸೊರಗು ರೋಗ ಮತ್ತು ಹಳದಿ ನಂಜು ರೋಗಗಳು ಕಂಡುಬರುತ್ತವೆ. ಮುಖ್ಯವಾಗಿ ಎಲೆ ಸೊರಗು ರೋಗ ಪ್ರಮುಖವಾಗಿದ್ದು, ಇದು ಸಸ್ಕೋಸ್ಪೋರ ಪ್ರಭೇದದ ಶಿಲೀಂಧ್ರಗಳಿಂದ ಬರುತ್ತದೆ. ಇದನ್ನು ಜೈನೆಬ್ (ಶೇ. 0.5) ಸಿಂಪರಣೆಯಿಂದ ಹತೋಟಿ ಮಾಡಬಹುದು. ನಂಜು ರೋಗಕ್ಕೆ ತುತ್ತಾದ ಗಿಡಗಳನ್ನು ಗುರುತಿಸಿ ಬೇರು ಸಮೇತ ಕಿತ್ತು ಸುಡಬೇಕು.

ಎಲೆ ತಿನ್ನುವ ಕಂಬಳಿ ಹುಳು, ಎಲೆ ಸುತ್ತುವ ಹುಳು, ಮಿರಿಡ್ ತಿಗಣೆ ಮತ್ತು ಎಲೆ ಗೂಡು ಕಟ್ಟುವ ಹುಳುಗಳ ಬಾಧೆ ಕಂಡು ಬಂದಲ್ಲಿ 1 ಮಿ. ಲೀ. ಮಿಥೈಲ್ ಪ್ಯಾರಾಥಿಯಾನ್ ಅಥವಾ 2 ಮಿ. ಲೀ. ಮೆಲಾಥಿಯಾನ್ 1 ಲೀ. ನೀರಿನಲ್ಲಿ ಕರಗಿಸಿ ಬೆಳೆಗೆ ಸಿಂಪಡಿಸಬೇಕು.

---

## ಗೌರವದ ರಹಸ್ಯ

ಆಧುನಿಕ ಕಾಲದಿ ಗೌರವ ಸಿಗಲು
ಇರಬೇಕು ನಿಮ್ಮಲ್ಲಿ ಶುಚಿತ್ವ ದಜವಲು ||೧||

ಮೌನಿಯಾಗಿ ಪಥದಿ ಚಲಿಸಬೇಕು
ವಂದನೆ ಮಾಡಿರಿ ಸುಜನರಿಗೆ ಮುಗುಳ್ನಕ್ಕು ||೨||

ಹಸ್ತದಲಿ ಇರಬೇಕು ಮಿಂಚುವವಾಚು
ತಲೆಯ ಮೇಲಿರಬೇಕು ಸ್ಟೈಲಿಶ್ ಕ್ರಾಪು ||೩||

ಧರಿಸಿರಬೇಕು ಚೆಲುವಿನ ಪೆನ್ನುಗಳೆರಡು
ಕರದಲ್ಲಿರಬೇಕು ಶೋಭಾಪ ಬೇಗು ||೪||

ಸ್ವಂತ ವಾಹನದಿ ಪಯಣವು ಚೆನ್ನ
ಅಪರೂಪದ ಸಭೆಗೆ ಹೋಗುವ ಮುನ್ನ ||೫||

ಬಳಿಯಲ್ಲಿದ್ದವರ ಪ್ರಶಂಸಿಸಬೇಕು
ಎಂದಿಗೂ ಪರರನು ಹೊಗಳಲುಬೇಕು ||೬||

ಆಂಗ್ಲ ಪದಗಳ ಆಗಾಗ ಬಳಸಬೇಕು
ಸೃಜನಶೀಲ ಮುಂತಾದ ಪದ ಹೇಳಬೇಕು ||೭||

ಒಂದೆರಡು ಭಾವಗೀತೆ ತಿಳಿದಿರಬೇಕು
ಉದ್ಯೋಗವೊಂದು ನೆಪಕ್ಕೆ ಇರಲೇಬೇಕು ||೮||

ಆಗ ಪಡೆಯುವಿರಿ ವಿಶೇಷ ಸನ್ಮಾನ
ಹೋದಲ್ಲಿ ಪಡೆವಿರಿ ಪ್ರೀತಿ ಸನ್ಮಾನ||೯||

- ಯಂ. ಗಂಗಾಧರಗೌಡ
ನಿವೃತ ಶಿಕ್ಷಕರು

## ಭಾವನೆಗಳು

ನಮ್ಮೆದೆಯ ಭಾವನೆಗಳೆಲ್ಲಾ ಅದ್ಯಾಕೋ
ಗೆಳತಿ ಭಿನ್ನ, ವಿಭಿನ್ನ.
ತೀರ ಚಿತ್ರ, ವಿಚಿತ್ರ
ಸ್ಥಿರತೆ, ಅಸ್ಥಿರತೆಯ ನಡುವಣ
ಸಿಲುಕಿ ನಲುಗುವ, ನಲುಗಿ ತನ್ನ
ಅಸ್ತಿತ್ವವನ್ನೇ ಕಳೆದುಕೊಳ್ಳುವಂತವುಗಳು....

ಎಲ್ಲೊ ಹುಟ್ಟಿದ ಜಲ ಸುತ್ತು
ಬಳಸಿ ಸಾಗರ ಸೇರುವಂತಲ್ಲ ಗೆಳತಿ
ನಮ್ಮ ಭಾವನೆಗಳು....
ದಿಕ್ಕು ದಿಸೆಯಿಲ್ಲದೆ ಒಂದೇ ಸಮನೆ ನಿರಂತರ
ಹರಿಯುತ್ತಾ ಹಠತ್ತಾಗಿ ಅರ್ಧದಲ್ಲೇ
ಬತ್ತಿ ಹೋಗುವಂತವುಗಳು.....

ಪೌರ್ಣಿಮೆಯ ಚಂದ್ರನ ಮೆರಗನ್ನ ಆನಂದಿಸುತ್ತಿದ್ದ
ಹಾಗೆ, ಅಮವಾಸ್ಯೆಯ ಪೂರ್ಣ ಕಗ್ಗತ್ತಲು ಆವರಿಸಿ
ಬಿಟ್ಟಂತೆ ಗೆಳತಿ ನಮ್ಮ ಭಾವನೆಗಳು....

ನಮ್ಮ ಮನದಾಳದ ಭಾವನೆಗಳೇ ಹೀಗೆ ಗೆಳತಿ
ಯಾವುದೊ ಆದಿಗೆ ಇನ್ಯಾವುದೋ ಅಂತ್ಯ
ಸಿಕ್ಕ ಹಾಗೆ...

-ಸ್ಮಿತಾ ಅಮೃತರಾಜ್, ಕುಯಿಂತೋಡು

---

ಪ್ರೇಮ ಧೈರ್ಯವಂತರ ಸೊತ್ತು.

# ಉಜ್ಜಯಿನಿ ಕಾಲಭೈರವ ಮಂದಿರ ಜೀರ್ಣೋದ್ಧಾರ

ಉಜ್ಜಯಿನಿಯಲ್ಲಿನ ಸಾವಿರ ವರ್ಷ ಹಳೆಯದಾದ ಕಾಲಭೈರವ ದೇವಾಲಯವನ್ನು ಆದಿಚುಂಚನಗಿರಿ ಮಠಾಧೀಶರಾದ ಬಾಲ ಗಂಗಾಧರನಾಥ' ಸ್ವಾಮೀಜಿ ಜೀರ್ಣೋದ್ಧಾರಗೊಳಿಸಿದ್ದಾರೆ. ಈ ದೇವಾಲಯದ ಉದ್ಘಾಟನೆ 28-4-2004 ರಂದು ನಡೆಯಿತು.



ಭಾರತದ ಪುರಾತನ ಪಟ್ಟಣಗಳಲ್ಲಿ ಉಜ್ಜಯಿನಿ ಒಂದು. ಅವಂತಿ ಎಂಬ ಪರ್ಯಾಯ ನಾಮ ಇರುವ ಭಾರತದ ಏಳು ಪುಣ್ಯ ಕ್ಷೇತ್ರಗಳಲ್ಲಿ ಇದು ಒಂದು. ಈಶ್ವರನು ತ್ರಿಪುರ ದಹನ ಮಾಡಿ ವಿಜಯಗಳಿಸಿದ್ದರ ನೆನಪಿಗಾಗಿ ಇದಕ್ಕೆ 'ವಿಜಯಿನಿ' ಎಂಬ ಹೆಸರಾಯಿತೆಂದೂ ಕಾಲಾಂತರದಲ್ಲಿ 'ಉಜ್ಜಯಿನಿ' ಎಂದು ರೂಪಾಂತರಗೊಂಡಿತೆಂದೂ ಪ್ರತೀತಿ.

ಪ್ರಸಿದ್ಧ ಪ್ರಾಚೀನ ಮಾಳವ ದೇಶದ ರಾಜಧಾನಿಯಾಗಿದ್ದ ಉಜ್ಜಯಿನಿ ಸಿಪ್ರಾನದಿಯ ಬಲದಂಡೆಯ ಮೇಲಿದೆ. ಶ್ರೀ ಕೃಷ್ಣ, ಬಲರಾಮ, ಸುಧಾಮರು ಗುರುಕುಲವಾಸ ನಡೆಸಿದ ಸಾಂದೀಪನೀ ಮುನಿಯ ಆಶ್ರಮ ಉಜ್ಜಯಿನಿಯ ಸಮೀಪದ ಗೋಮತಿ ಸರೋವರದ ಬಳಿಯಿರುವ ಉಪವನದ ಪ್ರದೇಶದಲ್ಲಿತ್ತೆಂದು ಹೇಳುತ್ತಾರೆ. ಮೊದಲಿನ ಉಜ್ಜಯಿನಿಯು, ಈಗಿನ ಉಜ್ಜಯಿನಿಯ ಉತ್ತರಕ್ಕಿರುವ 'ಘರ್‌ಕಾಲಿಕ' ಎಂಬಲ್ಲಿತ್ತೆಂದು ಹೇಳಲಾಗಿದೆ. ಆ ಸ್ಥಳ ಸಿಪ್ರಾ ನದಿಯ ಪೂರ್ವ ದಡದಲ್ಲಿದೆ. ಅಲ್ಲಿ ಮಧ್ಯಕಾಲೀನ ಅವಧಿಯ, ಈಗ ಸಾಕಷ್ಟು ಜೀರ್ಣೋದ್ಧಾರಗೊಂಡ ಕಾಳಿಕಾ ದೇವಾಲಯವಿದೆ. ಅದು ಕಾಳಿದಾಸನ ಆರಾಧ್ಯದೈವನೆಂದು ನಂಬಲಾಗಿದೆ. ಹಾಗೇ ಪರಂಪರೆಯಿಂದ ಪ್ರಸಿದ್ಧವಿರುವ ಅಲ್ಲಿನ 'ಮಹಾ ಕಾಳ' ವೆಂಬ ಜ್ಯೋತಿರ್ಲಿಂಗವನ್ನೊಳಗೊಂಡ ದೇವಸ್ಥಾನಕ್ಕೆ ಉಜ್ಜಯಿನಿ ಪ್ರಸಿದ್ಧವಷ್ಟೆ. ಈ ಸ್ಥಳದಲ್ಲಿ ಮತ್ತು ಪರಿಸರದಲ್ಲಿ ಅನೇಕ ಪುರಾಣ, ಪ್ರಸಿದ್ಧ ಸಂದರ್ಶನೀಯ ಎಡೆಗಳಿವೆ. ಅವುಗಳಲ್ಲಿ ಹರಿಸಿದ್ಧ ಮಾತಾ ಅನ್ನಪೂರ್ಣೇಶ್ವರಿ, ತ್ರೀವೇಣಿ ಸಂಗಮ, ಭೈರೋಘರ್ ಮುಂತಾದವು ಗಮನಾರ್ಹ

ಭೈರೋಘರ್ ಪೂರ್ವಕ್ಕೆ ಸಿಪ್ರಾನದಿಯ ದಡದ ಮೇಲೆ ಒಂದು ಕುಬ್ಜ ಪುರಾತನ ವಟವೃಕ್ಷವಿದ್ದು ಅದು ಬಹು ಪವಿತ್ರ ವೃಕ್ಷವೆಂದು ನಂಬಲಾಗಿದೆ. ಆ ಸಿದ್ಧವಟ ಘಟ್ಟ ಒಂದು ಪವಿತ್ರ ತೀರ್ಥವೆನಿಸಿದೆ. ಒಂದು ಸಾವಿರ ವರ್ಷದಷ್ಟು ಪ್ರಾಚೀನವಾದ ಅದು ಯಾವುದೇ ಬದಲಾವಣೆಗೆ ಈಡಾಗಿಲ್ಲವೆಂದು ಭಾವಿಸಲಾಗಿದೆ. ನದಿಯ ದಡದ ಕೋಟೆಯ ಇನ್ನೊಂದು ಬದಿಯಲ್ಲಿರುವ ಈ ಪ್ರದೇಶದಲ್ಲಿ ಪ್ರಾಚೀನ ಕಾಲದಲ್ಲಿ ಭದ್ರಸೇನ ಎಂಬುವವನಿಂದ ಕಾಲಭೈರವ ದೇವಾಲಯ ಸ್ಥಾಪನೆಯಾಯಿತು. ಈ ಗುಡಿಯ ತಳವಿನ್ಯಾಸ ಭೈರವಿ ಚಕ್ರದ ರೂಪವನ್ನು ಹೋಲುತ್ತದೆ.

ಕಾಲ ಭೈರವನ ಬಿಂಬ ದೇವಾಲಯದ ಭಿತ್ತಿಯಲ್ಲೇ ಸೇರಿಕೊಂಡಿದ್ದು ವಿಶಿಷ್ಟವಾಗಿದೆ. ಅದು ತೆರೆದ ಬಾಯಿಯಿಂದ ಕೂಡಿದೆ. ತಾಂತ್ರಿಕ ಭೈರವಿ ಚಕ್ರಗಳ ಆರಾಧನೆಯಲ್ಲಿ ಮದ್ಯವನ್ನು ಭೈರವನಿಗೆ ಕುಡಿಸುವುದು ಒಂದು ಮುಖ್ಯ ಆಚರಣೆಯಾಗಿದೆ. ಭಕ್ತರು ಈ ಕಾಲಭೈರವನ ಬಾಯಿಗೆ ಮದ್ಯವನ್ನು ಸುರಿದು ಆರಾಧಿಸುತ್ತಾರೆ. ಹಾಗೇ ಸುರಿದ ಮದ್ಯ ಭೈರವನ ಬಾಯಿಯಲ್ಲೇ ಹಿಂಗಿ ಹೋಗಿರುತ್ತದೆ. ಪ್ರಾಯಶಃ ಭೂಮಿಯೊಂದಿಗೆ ಸಂಪರ್ಕಿಸುವ ಗುಪ್ತಮಾರ್ಗವಿರಬಹುದು.

ಕಾಲಭೈರವನು ವಾಮಮಾರ್ಗಿ ತಾಂತ್ರಿಕ ದೇವತೆಯಾಗಿರುವುದರಿಂದ ವಿಶಿಷ್ಟ ಲಕ್ಷಣಗಳಿಂದ ಕೂಡಿರುತ್ತದೆ. ಶಿವ ಮತ್ತ ಗಣೇಶರಿಗೆ ವೃಷಭ ಮತ್ತು ಮೂಷಕಗಳು ಹೇಗೋ ಹಾಗೆಯೇ ಭೈರವ ದೇವರಿಗೆ ಮುದ್ದು ಪ್ರಾಣಿ ನಾಯಿ ಸೇವೆಯನ್ನು ಸಲ್ಲಿಸುತ್ತದೆ.

ಪ್ರಾಚೀನ ಕಾಲದ ಈ ಕಾಲ ಭೈರವ ದೇವಾಲಯ ಮತ್ತು ಅಲ್ಲಿನ ಛತ್ರಗಳ ದುಸ್ಥಿತಿಯನ್ನು ಕಂಡು ಬಂದ ಭೈರವ ಭಕ್ತರು ಕರ್ನಾಟಕದ ಪ್ರಸಿದ್ಧ ಪುರಾತನ ಕಾಲಭೈರವ ಕ್ಷೇತ್ರವಾದ ಆದಿ ಚುಂಚನಗಿರಿಯ ಪೀಠಾಧ್ಯಕ್ಷ ಬಾಲಗಂಗಾಧರನಾಥ ಸ್ವಾಮೀಜಿ ಅವರ ಗಮನಕ್ಕೆ ತಂದು ಅವುಗಳನ್ನು ಜೀರ್ಣೋದ್ಧಾರಗೊಳಿಸಬೇಕೆಂಬ ಬೇಡಿಕೆಯನ್ನು ಮುಂದಿಟ್ಟರು.

ಸ್ವಾಮೀಜಿಯವರು ಉಜ್ಜಯಿನಿಯ ಈ ಭೈರವ ದೇವಾಲಯ ಹಾಗೂ ಅದಕ್ಕೆ ಹೊಂದಿಕೊಂಡತಿದ್ದ ಛತ್ರಗಳನ್ನು ಜೀರ್ಣೋದ್ಧಾರ ಮಾಡಿದ್ದಾರೆ. ಉಜ್ಜಯಿನಿಯಲ್ಲಿ ಈಗ ನಡೆಯುತ್ತಿರುವ ಸಿಂಹಸ್ಥ ಕುಂಭಮೇಳದ ವೇಳೆಗೆ ವಿಸ್ತತಗೊಳಿಸಿ ಪುನನಿರ್ಮಾಣ ಮಾಡಿರುವ ಶ್ರೀ ಕಾಲಭೈರವ ಮಂದಿರ ಮತ್ತು ನೂತನವಾಗಿ ನಿರ್ಮಿಸಿರುವ ಧರ್ಮಶಾಲೆಯನ್ನು ಲೋಕಾರ್ಪಣೆ ಮಾಡಬೇಕೆಂದು ಸಂಕಲ್ಪಿಸಿದ್ದರು.

ಅದರಂತೆ ಏ. 29-4-2004 ರಂದು ಉಜ್ಜಯಿನಿಯ ಶ್ರೀ ಸಾಯಿ ಫೌಂಡೇಶನ್‌ನ ರತಿ, ಶಿವಪುರಿ ಸ್ವಾಮೀಜಿ, ಶಿವಲಿಂಗಾನಂದ ಸ್ವಾಮೀಜಿ, ನಂಜಾವಧೂತ ಸ್ವಾಮೀಜಿ, ಅಭಿನವ ಶಿವಪುತ್ರ ಸ್ವಾಮೀಜಿ ಅವರ ಸಮ್ಮುಖದಲ್ಲಿ ಈ ಲೋಕಾರ್ಪಣೆ ಕಾರ್ಯ ನಡೆಯಿತು.

-ಡಾ. ಪಿ. ವಿ. ಕೃಷ್ಣಮೂರ್ತಿ.

# ಕರ್ಮಂಜಿ ಹಣ್ಣು ಅವನತಿಯ ಹಾದಿಯಲ್ಲಿ



"ಅಲ್ಲಿದೆ ಇಲ್ಲಿತ್ತು' ಎಂದೆಲ್ಲಾ ಕೊಡಗಿನ ಹಳೆತಲೆಗಳ ಸೂಚನೆ ಕೇಳಿ ಕಾಡುಮೇಡುಗಳಲ್ಲಿ ಅಲೆದಾಡಿದೆ. ಎಲ್ಲೂ ಕಾಡು ಹಣ್ಣು ಕರ್ಮಂಜಿಯ ಸುಳಿವೇ ಇಲ್ಲ.

ಎಲ್ಲೋ ಉಳಿದ ಒಂದಷ್ಟು ಕಾಡಿನಲ್ಲಿ ಅಪರೂಪಕ್ಕೆಂಬಂತೆ ಒಂದೆರಡು ಬಳ್ಳಿಗಳು ಉಳಿದಿದ್ದರೆ, ಅದು ನಮ್ಮ ಭಾಗ್ಯವೆಂದೇ ಹೇಳಬೇಕು. ಹೇಳಿ, ಕೇಳಿ ಮುಳ್ಳಿನ ಬಳ್ಳಿ ಹಳ್ಳಿಗಾಡಿನ ಹಣ್ಣು ಯಾರಿಗೆ ಬೇಕು ಹೇಳಿ?

ಅಂದಹಾಗೆ ಇದೊಂದು ರುಚಿಕರ ಹಣ್ಣು. ಪುಟ್ಟ ನಿಂಬೆ ಗಾತ್ರ ಉರುಟಾದ ಹಣ್ಣು. ಹಸಿರುಕಾಯಿ ಹಣ್ಣಾದಾಗ ನೇರಳೆ ಕಂದು ಬಣ್ಣಕ್ಕೆ ತಿರುಗುತ್ತದೆ. ಸಿಪ್ಪೆ ಬಲು ತೆಳು. ಕೊಯ್ದಾಗ ಹೊರಸೂಸುವ ಹಾಲು ಬಣ್ಣದ ಮೇಣ. ಈ ಮೇಣವನ್ನು ಅಲಕ್ಷಿಸಿ, ಬಳ್ಳಿಯ ಮುಳ್ಳುಗಳು ಬೆರಳಿಗೆ ಚುಚ್ಚದಂತೆ ಎಚ್ಚರದಿಂದ ಮಾಗಿದ ಹಣ್ಣು ಕುಯ್ದರೆ ಬಾಯಿ ಚಪ್ಪರಿಸಿ ತಿನ್ನಬಹುದು. ಕೈತುಂಬ ಮೆತ್ತಿಕೊಳ್ಳುವ ಮೇಣ ನೀರಿನಲ್ಲಿ ತೊಳೆದರೆ ಕರಗಿ ಹೋಗಿ ಬಿಡುತ್ತದೆ.

ಒಂದಷ್ಟು ಹಣ್ಣು ತಿಂದ ನಂತರ ಥಟ್ಟನೆ ಪ್ರಶ್ನೆ ಮೂಡಿತು. ಇಲ್ಲಿ ಇಷ್ಟು ಕರ್ಮಂಜಿ ಬಳ್ಳಿ ಹೇಗೆ ಉಳಿಯಿತು? ಕಾಫಿ ತೋಟ, ಶುಂಠಿಯ ಮಡಿ ಎಬ್ಬಿಸುವ ಭರಾಟೆಯಲ್ಲಿ ಉಳಿದ ಎಲ್ಲೆಡೆ ನಾಶವಾಗಿದೆ. ವಿಚಾರಿಸುತ್ತಾ ಹೋದಾಗ ಈ ಬಳ್ಳಿಗಳನ್ನು ಉಳಿಸಿದ್ದು ಹತ್ತಿರದ ಕೃಷಿಕರು ಒಂದು ತಿಳಿಯಿತು.

ಮೊದಲೆಲ್ಲಾ ಕರ್ಮಂಜಿ ಹಣ್ಣಿನ ಬಳ್ಳಿಗಳು ಕಾಡಿನಲ್ಲಿ ಧಾರಾಳ ಇದ್ದವು ಎಂದು ಹಿರಿಯರು ಹೇಳುತ್ತಾರೆ. ಈಗೆಲ್ಲಾ ಕರ್ಮಂಜಿ ಬಳ್ಳಿ ಕಂಡವರೇ ಅಪರೂಪ. ಕಡಿಯದಂತೆ ತಾಕೀತು ಮಾಡಿ ಮುಳ್ಳಿನ ಬಳ್ಳಿಯನ್ನು ಉಳಿಯಗೊಟ್ಟವರೇ ಇಲ್ಲ.

ಹಣ್ಣಿನಲ್ಲಿ ಹಾಲಿನಂತೆ ಮೇಣ ಒಸರುವುದಕ್ಕೋ ಏನೋ ಕೊಡಗಿನಲ್ಲಿ ಇದು ಪಾಲ್ ಕರ್ಮಂಜಿ ಎನಿಸಿಕೊಂಡಿದೆ. ಸಸ್ಯ ಶಾಸ್ತ್ರೀಯ ಹೆಸರು 'ಕಾರಿಸಾ ಗ್ಯಾಂಗೆಟಿಕಾ' ಕುಟುಂಬ ಅಪೋಸೈನಿಯೇಸಿಯೆ ರುಚಿ, ಪರಿಮಳಗಳಲ್ಲಿ ವ್ಯತ್ಯಾಸವಿರುವ ಕರ್ಮಂಜಿ ಹಣ್ಣುಗಳಿವೆ.

ಕರ್ಮಂಜಿ ಬಳ್ಳಿ ಆಸರೆಗೆ ಸಿಗುವ ಮರಗಳ ಮೇಲೆ ಹಬ್ಬುತ್ತದೆ. ಹಣ್ಣನ್ನು ಒಡೆದರೆ ಇರುವ ಮೂರ್ನಾಲ್ಕು ಚಿಕ್ಕ ಕಪ್ಪು ಬೀಜಗಳಿಂದ ಗಿಡ ಎಬ್ಬಿಸಬಹುದು. ಆದರೆ ನೆಡುವವರು ಬೇಕಲ್ಲಾ?

ಕರ್ಮಂಜಿ ಹಣ್ಣಿನಿಂದ ಜಾಮ್ ಮಾಡಿದರೆ ಮಾರುಕಟ್ಟೆಯ ಯಾವುದೇ ಜಾಮಿಗೆ ಸ್ಪರ್ಧೆ ಕೊಡುವ ರುಚಿ. ಬಲಿತಕಾಯಿ ಉಪ್ಪಿನಕಾಯಿಗೆ ಆಗುತ್ತದೆ. ಆದರೆ, ಇಲ್ಲಿ ತಯಾರಿಸುವ ವಿಧಾನದಲ್ಲಿ ಕರ್ಮಂಜಿ ಉಪ್ಪಿನಕಾಯಿ ಬಹುದಿನ ಉಳಿಯುವದಿಲ್ಲ. ದೀರ್ಘಕಾಲ ಇಡಬಲ್ಲ ಉಪ್ಪಿನಕಾಯಿ ತಯಾರಿ ಕ್ರಮ ತಿಳಿದವರು ಹೇಳಿಕೊಟ್ಟರೆ ಉಪಕಾರ ವಾಗಬಹುದು.

ಬೇಸಿಗೆಯಲ್ಲಾದರೆ ದಾಹ ನೀಗಲು ಎರಡು ಕರ್ಮಂಜಿ ಹಣ್ಣು ಸಾಕು. ಅವಸರಕ್ಕೆ ಹಸಿವೆಯನ್ನೂ ಸಹ. ಆದರೆ, ಈ ಹಣ್ಣು ಮಾಗುವದು ಮಳೆಗಾಲದಲ್ಲೇ.

ಕರ್ಮಂಜಿಯ ಬೇರು ಉತ್ತಮ ಹಳ್ಳಿ ಮದ್ದು. ಮಳೆಗಾಲದಲ್ಲಿ ಜ್ವರ ಕಾಡಿದಾಗ ಇದರ ಬೇರಿನ ಕಷಾಯ ಮಾಡಿ ಕುಡಿಸುತ್ತಾರೆ. ನಾವು ಉಳಿಸಿಕೊಳ್ಳಲೇಬೇಕಾದ ಕಾಡು ಹಣ್ಣಿದು ಎನ್ನುವ ಅಭಿಪ್ರಾಯ ಹಲವರದ್ದು. ಆದರೆ ಹಬ್ಬಿ ಬೆಳೆವ, ಮುಳ್ಳುಗಳಿಂದ ಕೂಡಿದ ಈ ಬಳ್ಳಿಯನ್ನು ಉಳಿಸಿ ಬೆಳೆಸುವದು ಕಷ್ಟ ಸಾಧ್ಯವೇ ಎನ್ನುವದು ಕೃಷಿಕರ ಅಭಿಪ್ರಾಯ. ಅದೇನೇ ಇರಲಿ, ಕರ್ಮಂಜಿ ಕಣ್ಮರೆಗೆ ಇಳಿಲೆಕ್ಕ ಆರಂಭವಾಗಿದೆ. ಇದರ ಸಂತತಿ ಉಳಿಸುವ ಆಸಕ್ತರು ಈಗಲೇ ಕಾರ್ಯ ಪ್ರವೃತ್ತ ರಾಗಬೇಕಿದೆ.

ಲೇಖನ : ವಿಸ್ಮಯ ಚಿತ್ರ : **ಇ.ಕೆ. ತಿಮ್ಮಪ್ಪ**

# ಹಣ್ಣು - ತರಕಾರಿ ಆರೋಗ್ಯಕ್ಕೆ ದಾರಿ

ಪುಟಾಣಿಗಳೇ,

ನಮ್ಮ-ನಿಮ್ಮ ಮನೆಯಲ್ಲೆಲ್ಲ ಆಹಾರ ಬೇಯಿಸಿ ತಿನ್ನುವ ಪದ್ಧತಿ ಇದೆ. ಶಿಲಾಯುಗದಲ್ಲಿ ಅಕಸ್ಮಾತ್ ಬೆಂಕಿ ಕಂಡುಹಿಡಿದ ಮಾನವ, ಬೇಯಿಸಿ ತಿಂದರೆ ರುಚಿಕಟ್ಟಾಗಿರುತ್ತದೆ ಎಂಬುದನ್ನು ಕಂಡುಕೊಂಡ. ಆದರೆ ಆಗ ಆತ ಬೇಯಿಸಿದ್ದು ಮಾಂಸವನ್ನು. ಕ್ರಮೇಣ ಗೆಡ್ಡೆ-ಗೆಣಸುಗಳನ್ನೂ ಬೇಯಿಸಿ ಚಪ್ಪರಿಸತೊಡಗಿದ.

ಸಸ್ಯಮೂಲ ಆಹಾರಗಳಾದ ಸೊಪ್ಪು, ತರಕಾರಿ, ಹಣ್ಣು, ಗೆಡ್ಡೆ ಇವುಗಳನ್ನು ಬೇಯಿಸಿದರೆ, ಪೌಷ್ಠಿಕಾಂಶ ನಷ್ಟವಾಗುತ್ತದೆ ಎಂಬುದು ಎಲ್ಲರಿಗೂ ಗೊತ್ತಿದೆ. ಕೆಲ ಸಸ್ಯಗಳಾದ ಕೆಸುವಿನ ಸೊಪ್ಪು ಇತ್ಯಾದಿ ತುರಿಕೆ-ತರಕಾರಿಗಳನ್ನು ಬೇಯಿಸದೆ ತಿನ್ನಲು ಬರುವುದಿಲ್ಲ. ಆದರೆ ನಮ್ಮ ಆಹಾರ ಪದ್ಧತಿ ಹೇಗಿದೆ ಎಂದರೆ, ಹಸಿಯಾಗಿ ತಿನ್ನಬಹುದಾದಂಥ ತರಕಾರಿಗಳನ್ನೂ ಬೇಯಿಸಿಯೇ ತಿನ್ನುತ್ತೇವೆ. ಇದರಿಂದ ನಷ್ಟ ನಮಗೇ ಎಂಬುದು ನಮಗೆ ಗೊತ್ತಿಲ್ಲ.

ಉದಾಹರಣೆಗೆ ಸೌತೆಕಾಯಿ ಇದು ಅತಿ ಕಡಿಮೆ ಕ್ಯಾಲೋರಿ ಹೊಂದಿರುವ, ಜೀರ್ಣಶಕ್ತಿ ಹೆಚ್ಚಿಸುವಂಥ ತರಕಾರಿ. ಇದನ್ನು ಹಸಿಯಾಗಿಯೇ ತಿನ್ನಬೇಕು. ಹಾಗೆಯೇ ಟೊಮೆಟೊ ಹಣ್ಣು, ನಾವು ಹುಳಿ, ಗೊಜ್ಜು ಇತ್ಯಾದಿ ಮಾಡುವಾಗ ಬೇಯಿಸುತ್ತೇವಾದರೂ ರುಚಿಯಾಗಿರುತ್ತದೆಯೇ ಹೊರತು ಪ್ರಯೋಜನವಿಲ್ಲ. ನಿಮಗೆ ಗೊತ್ತೆ? ಒಂದು ಒಳ್ಳೆ ಗಾತ್ರದ ಹಸಿ ಟೊಮೆಟೊ ಹಣ್ಣಿನಲ್ಲಿರುವ ಪೌಷ್ಠಿಕಾಂಶ ಒಂದು ಮೊಟ್ಟೆಯಲ್ಲಿರುವ ಪೌಷ್ಠಿಕಾಂಶಕ್ಕೆ ಸಮ ಎಂದು ವಿಜ್ಞಾನಿಗಳೂ ಹೇಳಿದ್ದಾರೆ. ಹಸಿ ಸೊಪ್ಪು ಕಣ್ಣಿಗೆ ಒಳ್ಳೆಯದು. ಕೆಲವು ಯೋಗ ಸಾಧಕರು ಕೇವಲ ಹಸಿ ತರಕಾರಿ ತಿಂದೇ ಜೀವನ ನಡೆಸುತ್ತಿರುವ ಉದಾಹರಣೆಗಳಿವೆ. ಅವರು ನೂರು ವರ್ಷವಾದರೂ ಆರೋಗ್ಯವಂತರಾಗಿಯೇ ಬದುಕು ಸಾಗಿಸುತ್ತಿರುತ್ತಾರೆ!

ಹಣ್ಣುಗಳೆಂದರೆ ನಮಗೆಲ್ಲ ಎಷ್ಟೊಂದು ಇಷ್ಟ. ದಿನಕ್ಕೊಂದು ಸೇಬು ತಿಂದರೆ ವೈದ್ಯರ ಅಗತ್ಯವೇ ಇರುವುದಿಲ್ಲ ಎನ್ನುತ್ತದೆ ಆಂಗ್ಲ ಗಾದೆ. ಆದರೆ ದುಬಾರಿಯಾಗಿರುವ ಹಣ್ಣುಗಳು ಬೇಕೆಂದು ಪಾಲಕರಲ್ಲಿ ಹಠ ಮಾಡುವುದೂ ಸರಿಯಲ್ಲ. ಹೀಗಾಗಿ ಸುಲಭವಾಗಿ ಸಿಗುವ, ದುಬಾರಿಯಲ್ಲದ ತರಕಾರಿ, ಸೊಪ್ಪು, ಹಣ್ಣುಗಳನ್ನೆ ತಿಂದರೂ ಪೌಷ್ಠಿಕ ದೊರೆಯುತ್ತದೆ. ನೀವು ಇಂದೇ ಹಸಿ ತರಕಾರಿ, ಮೊಳಕೆ ಕಾಳು ನಿಯಮಿತವಾಗಿ ತಿನ್ನುವ ಅಭ್ಯಾಸ ಮಾಡಿಕೊಂಡರೆ, ಆರೋಗ್ಯವಂತರಾಗುತ್ತೀರಿ. ನೆಮ್ಮದಿಯ ಜೀವನ ನಿಮ್ಮದಾಗುತ್ತದೆ.

- ಸಂಗಾತಿ

# ಅಂಟುವಾಳದ ನಂಟು ಇನ್ನೆಲ್ಲಿ?

ನೊರೆಭರಿತ ಅಂಟುವಾಳ ಕಾಯಿ ಈಗಿನವರಿಗೆ ಅಪರಿಚಿತ. ಇದು ಉತ್ತರ ಕನ್ನಡ, ಹಾಸನ, ಚಿಕ್ಕಮಗಳೂರು, ದಕ್ಷಿಣ ಕನ್ನಡ ಜಿಲ್ಲೆಗಳ ಬೆಟ್ಟಗಳಲ್ಲಿ ಸ್ವಾಭಾವಿಕವಾಗಿ ಬೆಳೆಯುವ ನಿಸರ್ಗದತ್ತ ಸಾಬೂನು. ನಮ್ಮ ಪೂರ್ವಿಕರಿಗೆ ಚಿರಪರಿಚಿತವಾಗಿದ್ದ ಮಾರ್ಜಕ ಅಂಟುವಾಳ.

'ಸೈಪಂಡಸ್ ಎಮಾರ್ಜನಟ್ಸ್' ಎಂಬ ಸಸ್ಯಶಾಸ್ತ್ರೀಯ ಹೆಸರಿನಿಂದ ಕರೆಯಲ್ಪಡುವ ಅಂಟುವಾಳ ಮರ ಸುಮಾರು 15 ಅಡಿಗಳವರೆಗೆ ಬೆಳೆಯುತ್ತದೆ. ಅಕ್ಟೋಬರ್‌ನಲ್ಲಿ ಹೂಬಿಟ್ಟು, ಮಾರ್ಚ್ ಏಪ್ರಿಲ್ ಹೊತ್ತಿಗೆ ಕಾಯಿ ಬಲಿಯುತ್ತದೆ. ಉದುರಿದ ಬಲಿತ ಹಣ್ಣುಗಳನ್ನು ಒಣಗಿಸಿದರೆ ಬಹಳ ಕಾಲ ಇಡಬಹುದು. ಜೊತೆಗೆ ಕೆ. ಜಿ. ಯೊಂದಕ್ಕೆ 5 ರೂಪಾಯಿಯಂತೆ ಮಾರಿ ಹಣ ಗಳಿಸಬಹುದು. ಮಲೆನಾಡಿನಲ್ಲಿ ಸಂಗ್ರಹಿಸಿದ ಅಂಟುವಾಳ ಕಾಯಿಗಳನ್ನು ಆಂಧ್ರಪ್ರದೇಶ ಹಾಗೂ ತಮಿಳುನಾಡಿನ ಸಾಬೂನು ಕಾರ್ಖಾನೆಗಳಿಗೆ ಸಾಗಿಸುವುದಿದೆ. ಅಂಟುವಾಳ ಕಾಯಿಯ ಕಪ್ಪು ಬಣ್ಣದ ಗಟ್ಟಿ ಬೀಜ ನೆಡುವುದರಿಂದ ಗಿಡ ಪಡೆಯಬಹುದು. ಬೇಲಿ ಸಾಲಿನಲ್ಲಿ ಈ ಗಿ ಡ ನೆಡುವುದು ಸೂಕ್ತ. ಕಾಯಿ ಕೊಯ್ಲು ಮಾಡುವಾಗ ಟೊಂಗೆ ಕಡಿಯುವುದು ಮರದ ಬೆಳವಣಿಗೆಗೆ ಮಾರಕ.

### *ಬಹುಪಯೋಗಿ*

ಚರ್ಮರೋಗವಿದ್ದವರು ಅಂಟುವಾಳ ಮೈಗೆ ಹಚ್ಚಿಕೊಂಡು ಸ್ನಾನ ಮಾಡುವುದರಿಂದ ಗುಣ ಸಾಧ್ಯ. ತಲೆಗೆ ಶಾಂಪೂ ಬದಲಿಗೆ ಅಂಟುವಾಳದ ಪುಡಿ ಉಪಯೋಗಿಸಿದರೆ ಕೂದಲಿಗೆ ಬೆಳವಣಿಗೆಗೆ ಸಹಕಾರಿ. ಬಟ್ಟೆ, ಪಾತ್ರೆ ತೊಳೆಯಲು ಹಾಗೂ ಆಭರಣ ಚೊಕ್ಕ ಮಾಡಲು ಅಂಟುವಾಳ ಸೂಕ್ತ. ಅಂಟುವಾಳ ನೊರೆ ಕುಡಿಸಿ ವಾಂತಿ ಮಾಡಿಸಬಹುದು. ಅರೆ ತಲೆನೋವು ಹಾಗೂ ದಮ್ಮಿನ ನಿವಾರಣೆಯಲ್ಲಿ ಅಂಟುವಾಳ ಪರಿಣಾಮಕಾರಿ.

ಇಂದು ಬೆಟ್ಟಗುಡ್ಡಗಳಲ್ಲಿ ಅಂಟುವಾಳ ಗಿಡ ಬಹುತೇಕ ಕಣ್ಮರೆಯಾಗಿದೆ. ಒಣಗಿಸಿದ ಕಾಯಿಗಳನ್ನು ಕುಟ್ಟಿಪುಡಿ ಮಾಡಿ ಬಳಸುವ ಪದ್ಧತಿಯೂ ಮರೆಯಾಗಿದೆ. ವೈವಿಧ್ಯಮಯ ಸೋಪುಗಳ ಆಕರ್ಷಣೆಯಲ್ಲಿ ಸಾಂಪ್ರದಾಯಿಕ ಅಂಟುವಾಳ ತನ್ನ ಪ್ರಭಾವ ಕಳೆದುಕೊಂಡಿದೆ. ಆದರೆ ಚಿಕಿತ್ಸಕ ದೃಷ್ಟಿಯಿಂದ ಹೇಳುವುದಾದರೆ ಅಂಟುವಾಳದ ಕೈ ಈಗಲೂ ಮೇಲೆ ಇರುವುದು.

- ಸಂಗಾತಿ

ಬೇವು ಬಿತ್ತಿ ಮಾವು ಪಡೆಯಲಾಗದು.

# ನಿಮಗೆಂತಹ ಮಗು ಬೇಕು ?

ಗರ್ಭಸ್ಥ ಮಹಿಳೆಯರ ಬೇಜವಾಬ್ದಾರಿತನ, ದುರಭ್ಯಾಸಗಳು ಮುಂದೆ ಜನಿಸುವ ಶಿಶುವಿನ ಮೇಲೆ ದುಷ್ಪರಿಣಾಮ ಬೀರಬಹುದು. ಅಂತಹ ಅನೇಕ ಉದಾಹರಣೆಗಳು ವೈದ್ಯಕೀಯ ವಿಜ್ಞಾನದ ಇತಿಹಾಸದಲ್ಲಿ ಕಂಡು ಬರುತ್ತವೆ. ಶಿಶು ತಾಯಿಯ ಗರ್ಭದಲ್ಲಿರುವಾಗಲೇ ದೈಹಿಕ ನ್ಯೂನತೆಗೊಳಗಾಗುವ ಸಾಧ್ಯತೆಗಳಿರುತ್ತವೆ. ವಿಶ್ವದೆಲ್ಲೆಡೆ ವೈದ್ಯರು, ಜೀವ ವಿಜ್ಞಾನಿಗಳು ಈ ವಿಷಯಗಳ ಬಗ್ಗೆ ಕೂಲಂಕುಷವಾಗಿ ಅಧ್ಯಯನ ನಡೆಸಿದ್ದಾರೆ. ಉದಾಹರಣೆಗೆ ಅಮೆರಿಕದ ಹಾರ್ವರ್ಡ್ ಮೆಡಿಕಲ್ ಸ್ಕೂಲಿನ ಐಲೀನ್ ಚೌಲೆಟ್ ಎಂಬ ವೈದ್ಯೆ ಮದ್ಯಸೇವನೆಯ ಚಟವಿದ್ದ 322 ಮಹಿಳೆಯರಿಗೆ (ಅಂದರೆ ಗರ್ಭಿಣಿಯರಾಗಿದ್ದಾಗಲೂ ಮದ್ಯ ಸೇವಿಸುತ್ತಿದ್ದ ಮಹಿಳೆಯರಿಗೆ) ಜನಿಸಿದ ಶಿಶುಗಳ ಬಗ್ಗೆ ಅಧ್ಯಯನ ನಡೆಸಿದಳು. ಪ್ರತಿ ದಿನ 10 ಔನ್ಸ್ (283 ಗ್ರಾಂ.) ಗಳಿಗಿಂತ ಹೆಚ್ಚಾಗಿ ಮದ್ಯ ಸೇವಿಸುತ್ತಿದ್ದ ಮಹಿಳೆಯರಿಗೆ ಜನಿಸಿದ ಶಿಶುಗಳಲ್ಲಿ ಮುಕ್ಕಾಲು ಭಾಗದಷ್ಟು ಶಿಶುಗಳ ತಲೆ ಚಿಕ್ಕದಾಗಿತ್ತಲ್ಲದೆ ಇತರ ಶಿಶುಗಳು ಜನನಕಾಲದ ನ್ಯೂನತೆಗಳಿಗೆ ಒಳಗಾಗಿದ್ದುದು ಕಂಡುಬಂದಿತು. ದಿನನಿತ್ಯ 10 ಔನ್ಸ್ ಗಳಿಗಿಂತ ಕಡಿಮೆ ಮದ್ಯ ಸೇವಿಸುತ್ತಿದ್ದ ಅಥವಾ ಮದ್ಯ ಸೇವನೆಯ ಚಟವೇ ಇರದಿದ್ದ ಮಹಿಳೆಯರಿಗೆ ಜನಿಸಿದ ಶಿಶುಗಳಲ್ಲಿ ಕೇವಲ ಶೇ. 35ರಷ್ಟು ಶಿಶುಗಳು ದೈಹಿಕ ನ್ಯೂನತೆಗಳಿಗೆ ಒಳಗಾಗಿದ್ದವು.



ಅಂತಹುದೇ ಅಧ್ಯಯನವೊಂದನ್ನು ಸೀಲಿಟಲ್‌ನಲ್ಲಿರುವ ವಾಷಿಂಗ್ಟನ್ ವಿಶ್ವವಿದ್ಯಾಲಯದ ಜೇಮ್ಸ್ ಹಾನ್ಸನ್ ಮತ್ತು ಅವರ ತಂಡ ನಡೆಸಿತು. ಅವರು ನಡೆಸಿದ ಪ್ರಯೋಗಗಳ ಫಲಿತಾಂಶ ವಿಭಿನ್ನವಾಗಿತ್ತು. ಅವರ ವರದಿಯ ಪ್ರಕಾರ ಯಾವುದೇ ಮಹಿಳೆ ಪ್ರತಿದಿನ 2 ರಿಂದ 10 ಔನ್ಸ್‌ಗಳಷ್ಟು ಶುದ್ಧ ವಿಸ್ಕಿಯ ಸೇವನೆ ಮಾಡುತ್ತಿದ್ದರೆ, ಈಕೆಗೆ ಹುಟ್ಟುವ 10 ಶಿಶುಗಳಲ್ಲಿ ಒಂದು ಶಿಶು (10:1 ಪ್ರಮಾಣದಲ್ಲಿ) ದೈಹಿಕ ನ್ಯೂನತೆಗೊಳಗಾಗಿರುತ್ತದೆ. ಆದರೆ ಪ್ರತಿದಿನ 10ಔನ್ಸ್‌ಗಳಿಗಿಂತ ಹೆಚ್ಚಿನ ಪ್ರಮಾಣದ ಶುದ್ಧ ವಿಸ್ಕಿ ಸೇವಿಸುವ ಮಹಿಳೆಗೆ ಜನಿಸುವ ಎರಡು ಮಕ್ಕಳಲ್ಲಿ ಒಂದು ಶಿಶು (2:1 ರ ಪ್ರಮಾಣ) ದೈಹಿಕ ನ್ಯೂನತೆಗಳೊಗಾಗುವ ಸಾಧ್ಯತೆಗಳಿರುತ್ತವೆ!

ನಮಗೆ ಬೇಕಾದ ಲಿಂಗದ ಮಗು (ಗಂಡು ಅಥವಾ ಹೆಣ್ಣು) ಹುಟ್ಟುವ ಹಾಗೆ ಮಾಡಲು ಸಾಧ್ಯವೇ? ಪ್ರಾಚೀನ ಕಾಲದ ಗ್ರೀಕರು ಒಂದು ವಿಷಯದ ಮೇಲೆ ನಂಬಿಕೆಯಿಟ್ಟಿದ್ದರು. ಆ ನಂಬಿಕೆಯಂತೆ ಬಲ ವೃಷಣದ ವೀರ್ಯದಿಂದ ಗಂಡು ಮಗು ಮತ್ತು ಎಡ ವೃಷ್ಣದ ವೀರ್ಯದಿಂದ ಹೆಣ್ಣು ಮಗು ಹುಟ್ಟುತ್ತದೆ. ತಂದೆತಾಯಿಯರ ಇರಾದೆಗನುಗುಣವಾಗಿ ಮಗು ಹುಟ್ಟಲು ಅನುವಾಗುವಂದೆ ವೈದ್ಯರು ಯಾವುದಾದರೂ ಒಂದು ವೃಷ್ಣವನ್ನು (ವೀರ್ಯ ಹೊರಬರದಂತೆ) ಕಟ್ಟುತ್ತಿದ್ದರಂತೆ. ಈ ನಂಬಿಕೆಯ ಸತ್ಯಾಸತ್ಯಗಳು ಏನೇ ಇರಲಿ ಬ್ರಿಟನ್ನಿನ ಸಂಶೋಧಕನೊಬ್ಬ ಲಿಂಗ ಆಯ್ಕೆ ಕಿಟ್ ಒಂದನ್ನು 1977 ರಲ್ಲಿಯೇ ತಯಾರಿಸಿ ಅದರ ಪೇಟೆಂಟ್ ಹಕ್ಕುಗಳನ್ನು ಪಡೆದಿದ್ದ.

ಸಾಮಾನ್ಯವಾಗಿ ಗೊತ್ತಿರುವಂತೆ ಗಂಡು ಮಗುವಿನ ಜನನಕ್ಕೆ ಕಾರಣವಾಗುವ ಮತ್ತು ವೀರ್ಯದಲ್ಲಿರುವ ವರ್ಣತಂತುಗಳು (ಕ್ರೋಮೋಜೋಮ್ಸ್) ಕ್ಷಾರೀಯ (Alcali) ಮಾಧ್ಯಮಗಳಲ್ಲಿ ಇತರ ಮಾಧ್ಯಮಗಳಲ್ಲಿ ಚಲಿಸುವುದಕ್ಕಿಂತ ) ವೇಗವಾಗಿ ಚಲಿಸುತ್ತವೆ. ಹಾಗೆಯೆ X ವರ್ಣತಂತುಗಳು ಆಮ್ಲೀಯ ಮಾಧ್ಯಮದಲ್ಲಿ ಹೆಚ್ಚು ವೇಗವಾಗಿ ಚಲಿಸುತ್ತವೆ. ಗರ್ಭಾಂಕುರವಾಗುವ ಸಂದರ್ಭದಲ್ಲಿ ಯಾವ ವರ್ಣತಂತು ಅಂಡವನ್ನು ಇನ್ನೊಂದರಕ್ಕಿಂತ ಶೀಘ್ರವಾಗಿ ತಲುಪುತ್ತದೆಯೋ ಆ ಅಂಶದ ಮೇಲೆ ಜನನವಾಗುವ ಶಿಶುವಿನ ಲಿಂಗ ನಿರ್ಧಾರವಾಗುತ್ತದೆ.

ಈ ವಿಷಯಗಳ ಬಗ್ಗೆ ಸಂಶೋಧನೆ ನಡೆಸಿದ ಬ್ರಿಟನ್ ಸಂಶೋಧಕ ಜಾನ್ ಪೊಲ್ಲಾರ್ಡ್ ತಂದೆತಾಯಿಯರು ಇಷ್ಟಪಟ್ಟ ಲಿಂಗದ ಮಗು ಹುಟ್ಟಲು ಸಹಾಯ ಮಾಡುವಂತಹ ಜೆಲ್‌ಗಳನ್ನು ತಯಾರಿಸಿದರು. ಒಂದು ಜೆಲ್‌ನ ಪಿ. ಎಚ್. ಮೌಲ್ಯ 8 ಆದರೆ, ಇನ್ನೊಂದು ಜೆಲ್‌ನ ಪಿ. ಎಚ್. ಮೌಲ್ಯ 7.6 ಆಗಿರುತ್ತದೆ. (Potntial of Hydrogenನ ಹ್ರಸ್ವರೂಪ ಪಿ. ಎಚ್. ಆಗಿದೆ. 25 ಡಿಗ್ರಿ ಸೆಲ್ಸಿಯಸ್ ಉಷ್ಣಾಂಶದಲ್ಲಿ 7ಕ್ಕಿಂತ ಕಡಿಮೆಯಿರುವ ಪಿ. ಎಚ್. ಮೌಲ್ಯ ಆಮ್ಲೀಯತೆಯನ್ನೂ 7 ನ್ನು ಮೀರಿದ್ದು ಕ್ಷಾರೀಯತೆಯನ್ನೂ ಸೂಚಿಸುತ್ತದೆ) ಪಿ. ಎಚ್. ಮೌಲ್ಯ 7 ಇರುವ ಜೆಲ್ ದೇಹಕ್ಕೆ ಸಂಬಂಧಪಟ್ಟ ರೀತಿಯಲ್ಲಿ ನೀಡಿದಾಗ ಹೆಣ್ಣು ಮಗುವಿನ ಜನನವಾಗುವುದಕ್ಕೆ ಕಾರಣವಾಗುತ್ತದೆ. ಹಾಗೆಯೇ ಪಿ. ಎಚ್. ಮೌಲ್ಯ 7ಗಿಂತ ಹೆಚ್ಚಾಗಿರುವ (ಅಂದರೆ 7.6) ಜೆಲ್ ಗಂಡು ಮಗುವಿನ ಜನನಕ್ಕೆ ಕಾರಣವಾಗುತ್ತದೆ. ಈ ಜೆಲ್‌ಗಳ

ಉಪಯೋಗದಿಂದ ಶೇ. 80 ಭಾಗ ಯಶಸ್ಸು ಖಂಡಿತ ಎಂಬುದು ಸಂಶೋಧಕರ ಹೇಳಿಕೆಯಾಗಿತ್ತು.

ತಾಯಿಯ ಗರ್ಭದಿಂದ ಹೊರಬಂದ ಶಿಶುವಿನ ಗಾತ್ರ ಅದು ಮುಂದೆ ಬೆಳೆದು ದೊಡ್ಡದಾದಾಗ ಯಾವ ಪರಿಣಾಮಕ್ಕೆ ಒಳಗಾಗಬಹುದು? ಶಿಶುವಿನ ಗಾತ್ರ ಅದರ ಮುಂದಿನ ಜೀವನದಲ್ಲಿ ಮಹತ್ತರ ಪಾತ್ರವ ವಹಿಸುತ್ತದೆಯೇ? ಹೌದುಎನ್ನುತ್ತಾರೆ ಸಂಶೋಧಕರು, ಈ ಬಗ್ಗೆ ಅಧ್ಯಯನ ನಡೆಸಿದ ಲಂಡನ್ನಿನ ಲಿವರ್ ಪೂಲ್ ವಿಶ್ವವಿದ್ಯಾಲಯದ ಸಂಶೋಧಕರು ಕುತೂಹಲಕರ ಸಂಗತಿಗಳನ್ನು ಹೊರಗೆಡವಿದ್ದಾರೆ. ಯಾವುದೇ ಶಿಶುವಿನ ದೈಹಿಕ ಮತ್ತು ಮಾನಸಿಕ ಬೆಳವಣಿಗೆ ಅದು ಹುಟ್ಟಿದಾಗ ಎಷ್ಟು ತೂಕವಿತ್ತು ಎಂಬ ವಿಷಯದ ಮೇಲೆ ಅವಲಂಬಿತವಾಗಿದೆ.

ಸಂಶೋಧಕರ ವೈದ್ಯಕೀಯ ವರದಿಯಂತೆ ಯಾವುದೇ ಮಗು ಸಣ್ಣ ಗಾತ್ರವಾಗಿದ್ದರೆ ಮುಂದೆ ಅದು ಯೌವನದ ಹಂತ ತಲುಪಿದಾಗ ಮಧುಮೇಹ ರೋಗ, ಅಸ್ತಮಾ, ಉಸಿರಾಟದ ತೊಂದರೆಗಳು ಹಾಗೂ ಹೃದ್ರೋಗಗಳಿಗೆ ತುತ್ತಾಗುವ ಸಾಧ್ಯತೆಯಿದೆ. ಮಗುವಿನ ಗಾತ್ರ ಕಡಿಮೆಯಾದಷ್ಟೂ ಆ ಸಾಧ್ಯತೆ ಹೆಚ್ಚಾಗಿರುತ್ತದೆ. ಅಷ್ಟೇ ಅಲ್ಲ, ಜನನದ ಸಮಯದಲ್ಲಿ ಗಾತ್ರದಲ್ಲಿ ಸಣ್ಣದಾಗಿದ್ದ ಯುವಕರು ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಗಾತ್ರದಲ್ಲಿ ದೊಡ್ಡದಾಗಿದ್ದ ಯುವಕರಿಗಿಂತ ಅತ್ಯಂತ ಕಡಿಮೆ ಯಶಸ್ಸು ಗಳಿಸುತ್ತಾರೆ ಅಥವಾ ಅನುತ್ತೀರ್ಣರಾಗುತ್ತಾರೆ.

ಹೀಗೆ ಮನಸ್ಸಿನ ವ್ಯಾಪಾರವೇ ವಿಚಿತ್ರವಾಗಿದೆ. ಇಟಲಿಯ ಸಂಶೋಧಕರ ಇತ್ತೀಚಿನ ವರದಿಯಂತೆ ಮಾರಿಜೂನವನ್ನು ಸೇವಿಸುವ ಗರ್ಭಿಣಿಯರಿಗೆ ಜನಿಸುವ ಮಕ್ಕಳ ಜ್ಞಾಪಕಶಕ್ತಿ ಕುಂದುತ್ತದೆ.

- ಕೈವಾರ ಗೋಪಿನಾಥ್

---

**ಕೊಡಗಿನ ಬೆಡಗು**

ತಂಪು ತೋಟಗಳ ನಡುವಿನ ಪರಿಸರ
ಕಾಫಿ, ಏಲಕ್ಕಿ, ಕಿತ್ತಳೆಗಳ ಸರದಾರ

ಕಾವೇರಿ ಬೆಡಗಿನ ರಸತಾಣ ನಿಸರ್ಗ
ಏರುಪೇರು ಕಡಿದಾದ ಈ ಮಾರ್ಗ

ಜಲಧಾರಿ ಅಬ್ಬಿಫಾಲ್ಸಿನ ಜಲಪಾತ
ಕೊಡಗು ಜನರ ಶೋಭಾನೆಯ ಪ್ರೇಮಸಪಾತ

ಗೌಡ ಜನಾಂಗದ ಈ ಶ್ರಮದ ಗೂಡು
ಇದುವೇ ಕೊಡಗಿನ ಜನರ ಈ ನಾಡು

ಕೋರರು, ಡಂಬರ, ಗುರುಕಾರರ ಈ ಬೀಡು
ಜಾತಿ-ಮತ ಬೇಧವಿಲ್ಲದ ಈ ನಾಡು

-ಸಂಧ್ಯ ರವಿರಾಜ್
ಉಡುಪಿ

**ಓ ನೆನಪುಗಳೇ...**

ಓ ನೆನಪುಗಳೇ ನೀವೇಕೆ ಕಾಡುವಿರಿ
ಎದೆಯ ಗಾಯವನ್ನೇಕೆ ಕೆದಕುವಿರಿ
ಕಣ್ಣೀರನ್ನೇಕೆ ಕೆಣಕಿ ಕೆನ್ನೆಯಲಿ ಜಾರಿಸುವಿರಿ||

ಓ ನೆನಪುಗಳೇ ನೀವೇಕೆ ಕಾಡುವಿರಿ
ಹೃದಯವನ್ನೇಎ ಕಂಪಿಸುವಿರಿ
ಮನವ ನೋಯಿಸಿ ನಿದ್ದೆಯನ್ನೇಕೆ ಕೆಡಿಸುವಿರಿ||

ಓ ನೆನಪುಗಳೇ ನೀವೇಕೆ ಕಾಡುವಿರಿ
ಗತ ಗಳಿಗೆಯನ್ನೇಕೆ ಹಿಂದಕ್ಕೆಳೆದು
ಭವಿಷ್ಯದಾಕಾಂಕ್ಷೆಗಳನ್ನೇಕೆ ಕೊಲ್ಲುವಿರಿ||
ಓ ನೆನಪುಗಳೇ ನೀವೇಕೆ ಕಾಡುವಿರಿ.

-ಕಟ್ಟೆಮನೆ ಆರ್. ನವೀನ್
ಸಿದ್ಧಾಪುರ.

---

**ನಗೆಹನಿ**

ತರಗತಿಯಲ್ಲಿ ಮೇಷ್ಟ್ರು ಪಾಠ ಮಾಡುತ್ತಿದ್ದರು. ಆಗ ಒಬ್ಬ ಹುಡುಗ ಒಂದು ಚೀಟಿಯಲ್ಲಿ 'Fool' ಎಂದು ಬರೆದು ಮೇಷ್ಟ್ರು ಹತ್ತಿರ ಎಸೆದ. ಆಗ ಮೇಷ್ಟ್ರು ಆ ಚೀಟಿಯನ್ನು ತೆಗೆದು ನೋಡಿ ಯಾರೋ ನನಗೆ ಅವರ ವಿಳಾಸವನ್ನು ಕೊಟ್ಟಿದ್ದಾರೆ ಎಂದರು.

-ಕೆ.ಜಿ. ಸಂಪತ್
ಅಯ್ಯಂಗೇರಿ



---

## ಅನಿಕೇತನ

ಓ ನನ್ನ ಚೇತನ
ಆಗು ನೀ ಅನಿಕೇತನ!
ರೂಪ ರೂಪಗಳನು ದಾಟಿ,
ನಾಮ ಕೋಟಿಗಳನು ಮೀಟಿ,
ಎದೆಯ ಬಿರಿಯ ಭಾವದೀಟಿ
ಓ ನನ್ನ ಚೇತನ,
ಆಗು ನೀ ಅನಿಕೇತನ!

ನೂರು ಮತದ ಹೊಟ್ಟತೂರಿ
ಎಲ್ಲ ತತ್ವದೆಲ್ಲೆ ಮೀರಿ
ನಿರ್ದಿಗಂತವಾಗಿ ಏರಿ,
ಓ ನನ್ನ ಚೇತನ,
ಆಗು ನೀ ಅನಿಕೇತನ!

ಎಲ್ಲಿಯೂ ನಿಲ್ಲದಿರು;
ಮನೆಯನೆಂದೂ ಕಟ್ಟದಿರು;
ಕೊನೆಯನೆಂದೂ ಮುಟ್ಟದಿರು;
ಓ ಅನಂತವಾಗಿರು !
ಓ ನನ್ನ ಚೇತನ,
ಆಗು ನೀ ಅನಿಕೇತನ!

ಅನಂತ ತಾನ್ ಅನಂತವಾಗಿ
ಆಗುತಿಹನೆ ನಿತ್ಯಯೋಗಿ;
ಅನಂತ ನೀ ಅನಂತವಾಗು;
ಆಗು, ಆಗು, ಆಗು, ಆಗು
ಓ ನನ್ನ ಚೇತನ,
ಆಗು ನೀ ಅನಿಕೇತನ!



### *ವಿಶ್ವಮಾನವ ಸಂದೇಶದ ಸಪ್ತ ಸೂತ್ರಗಳು*

1. ಮನುಷ್ಯ ಜಾತಿ ತಾನೊಂದೆ ವಲಂ ಎಂಬುದನ್ನು ನಿರುಪಾಧಿ ಸ್ವೀಕರಿಸಬೇಕು.
2. ವರ್ಣಾಶ್ರಮವನ್ನು ತಿದ್ದುವುದಲ್ಲ ಅದನ್ನು ಸಂಪೂರ್ಣವಾಗಿ ತೊಲಗಿಸಬೇಕು. ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಅಂತ್ಯಜ, ಷಿಯಾ, ಸುನ್ನಿ, ಪ್ರಾಟೆಸ್ಟೆಂಟ್, ಕ್ಯಾಥೋಲಿಕ್, ಸಿಖ್, ನಿರಂಕಾರಿ ಇತ್ಯಾದಿ ವಿಭಜನೆಯನ್ನು ನಿರ್ನಾಮ ಮಾಡಬೇಕು.
3. ಎಲ್ಲ ದೇಶಗಳಲ್ಲಿ ಮತ್ತು ಎಲ್ಲ ಮತಗಳಲ್ಲಿರುವ ಜಾತಿ ಪದ್ಧತಿಯನ್ನು ಸಂಪೂರ್ಣವಾಗಿ ನಿರಾಕರಿಸಿ, ವಿನಾಶಗೊಳಿಸ ಬೇಕು.
4. ಮತ ತೊಲಗಿ ಆಧ್ಯಾತ್ಮ ಮಾತ್ರ ವೈಜ್ಞಾನಿಕ ತತ್ವವಾಗಿ ಮಾನ್ಯತೆ ಪಡೆಯಬೇಕು.
5. ಮತ, ಮನುಜ ಮತವಾಗಬೇಕು. ಪಥ ವಿಶ್ವಪಥ ವಾಗಬೇಕು; ಮನುಷ್ಯ ವಿಶ್ವಮಾನವನಾಗಬೇಕು.
6. ಮತ ಗುಂಪು ಕಟ್ಟುವ ವಿಶಯವಾಗಬಾರದು, ಯಾರೂ ಯಾವ ಒಂದು ಮತಕ್ಕೂ ಸೇರದೆ, ಪ್ರತಿಯೊಬ್ಬನೂ ತಾನು ಕಂಡುಕೊಳ್ಳುವ ತನ್ನ ಮತಕ್ಕೆ ಮಾತ್ರ ಸೇರಬೇಕು. ಅಂದರೆ ಜಗತ್ತಿನಲ್ಲಿ ಎಷ್ಟು ವ್ಯಕ್ತಿಗಳಿದ್ದಾರೋ ಅಷ್ಟೇ ಸಂಖ್ಯೆಯ ಮತಗಳಿರುವಂತಾಗುತ್ತದೆ. ಯಾರೊಬ್ಬರೂ ಇನ್ನೊಬ್ಬರ ಮತಕ್ಕೆ ಸೇರಿ ಗುಂಪುಕಟ್ಟಿ ಜಗಳ ಹಚ್ಚುವಂತಾಗಬಾರದು.
7. ಯಾವ ಒಂದು ಗ್ರಂಥವೂ ಏಕೈಕ ಪರಮಪೂಜ್ಯ ಧರ್ಮ ಗ್ರಂಥವಾಗಬಾರದು. ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಸಾಧ್ಯವಾದುವುಗಳನ್ನೆಲ್ಲ ಓದಿ ತನ್ನ ದರ್ಶನವನ್ನು ತಾನೇ ನಿರ್ಣಯಿಸಿ ಕಟ್ಟಿಕೊಳ್ಳಬೇಕು.

-ಕುವೆಂಪು

## ಉನ್ನತ ಶ್ರೇಣಿಯಲ್ಲಿ ತಷ್ಮಿ ತಮ್ಮಯ್ಯ ತೇರ್ಗಡೆ



ಮುಕ್ಕಾಟಿಕ ತಷ್ಮಿ ತಮ್ಮಯ್ಯ

ಮೈಸೂರು ನಗರದ ಸದ್ವಿದ್ಯಾ ಪದವಿ ಪೂರ್ವ ಕಾಲೇಜಿನಲ್ಲಿ ಪದವಿ ಪೂರ್ವ ದ್ವಿತೀಯ ವರ್ಷದ 2003-04ರ ಸಾಲಿನ ಪರೀಕ್ಷೆಯಲ್ಲಿ 520 ಅಂಕಗಳನ್ನು ಗಳಿಸಿ ಉನ್ನತ ಶ್ರೇಣಿಯಲ್ಲಿ ಕು॥ ಮುಕ್ಕಾಟಿರ ತಷ್ಮಿ ತಮ್ಮಯ್ಯ ಪಾಸಾಗಿದ್ದಾಳೆ. ಇವಳು 600 ಅಂಕಗಳಿಗೆ 520 ಅಂಕಗಳನ್ನು ಅಂದರೆ 86.66% ನಲ್ಲಿ ಪಾಸಾಗಿದ್ದಾಳೆ. ತನ್ನ ನೆಚ್ಚಿನ ಐಚ್ಛಿಕ ವಿಷಯವಾದ ಫಿಜಿಕ್ಸ್‌ನಲ್ಲಿ 95% ಕೆಮೆಸ್ಟ್ರಿಯಲ್ಲಿ 98% ಮ್ಯಾಕ್ಸ್‌ನಲ್ಲಿ 85% ಅಂಕಗಳಿಸಿ, ಐಚ್ಛಿಕ ವಿಷಯದಲ್ಲಿ 92.66% ನಲ್ಲಿ ಪಾಸಾಗಿರುವುದು ಸಂತಸದ ಸಂಗತಿಯಾಗಿದೆ. ತಾನು ಓದುತ್ತಿರುವ ಕಾಲೇಜಿನಲ್ಲಿ 985 ಮಕ್ಕಳು ಪಾಸಾಗಿರುವರೆಂದು ತಿಳಿಸಿದ ಇವಳು ಜೀವನದಲ್ಲಿ ಉತ್ತಮ ಇಂಜಿನಿಯರ್ ಆಗುವ ಇಚ್ಛೆಯನ್ನು ಹೊಂದಿದ್ದಾಳೆ.

ಕು. ತಷ್ಮಿಯು ಮರಂದೊಡ ಗ್ರಾಮದ ಮುಕ್ಕಾಟಿರ ತಮ್ಮಯ್ಯ (ಗನ್ನಿ) ಮತ್ತು ಬೊಬ್ಬರಿ ಲತಾ ದಂಪತಿಗಳ ಪುತ್ರಿಯಾಗಿರುವ ಈಕೆಗೆ ಒಂಭತ್ತನೆ ತರಗತಿಯಲ್ಲಿ ಓದುತ್ತಿರುವ ತಂಗಿ ಜೀವಿತಾ ಇದ್ದಾಳೆ. ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ತಷ್ಮಿಯು 88% ಅಂಕ ತೆಗೆದು ಪಾಸಾಗಿದ್ದಳು. ಇವಳ ಮುಂದಿನ ಭವಿಷ್ಯ ಆಶಾದಾಯಕವಾಗಿರಲೆಂದು ಹಾರೈಸೋಣಾ.

- ಪಟ್ಟಡ ಪ್ರಭಾಕರ

## ಶುಭ ಹಾರೈಕೆ



ಮೇಜರ್ ತೆಕ್ಕಡ ಪೂಣಚ್ಚ ದಿನೇಶ್

ಭಾರತೀಯ ಭೂದಳದ ವೈದ್ಯಕೀಯ ವಿಭಾಗದಲ್ಲಿ ಸೇವೆ ಸಲ್ಲಿಸುತ್ತಿರುವ ಈ ಸಂದರ್ಭದಲ್ಲಿ ನಿನ್ನ ಪ್ರತಿಭೆಯನ್ನು ಗುರುತಿಸಿ ಭಾರತೀಯ ಭೂದಳದಲ್ಲಿ ಮೇಜರ್ ರ‍್ಯಾಂಕ್‌ಗೆ ಬಡ್ತಿ ಪಡೆದುಕೊಂಡ ನೀನು ಇನ್ನು ಉಚ್ಛ ಶ್ರೇಣಿಯನ್ನು ಪಡೆದು ಭರತ ಖಂಡದಲ್ಲಿ ಸೇವೆ ಸಲ್ಲಿಸುವ ಸೌಭಾಗ್ಯ ಲಭಿಸಲಿ ಎಂದು ಶುಭ ಹಾರೈಸುವ.

ವಿಳಾಸ : ತೆಕ್ಕಡ ಯಂ ಪೂಣಚ್ಚ
8, G-3, HIG I
K.H.B. Colony,
Hootgally, Mysore - 86
Phone : 0821-2403763

ಯಿಂದ : ತಂದೆ ತೆಕ್ಕಡ ಪೂಣಚ್ಚ, ತಾಯಿ ಧರ್ಮಾವತಿ.
ಪತ್ನಿ : ಕ್ಯಾಪ್ಟನ್ ದರ್ಶನ್ ಕೌರ್, ನ್ಯೂಡೆಲ್ಲಿ
ಹಾಗೂ ಕುಟುಂಬ ವರ್ಗದವರು.

Reg. No. KA / SK / MYS / 88 /2003-05 RNI No. : 10-01-96 TCI Kar. 09592

# ಧೃತಿ ಪೊನ್ನಪ್ಪ - ವ್ಯಕ್ತಿ ಪರಿಚಯ



ಬೆಂಗಳೂರಿನಲ್ಲಿ ಕಾವೇರಿ ನಾಡಿನ ಕಾವೇರಿ ಗುಡ್ಡದಲ್ಲಿ ನೃತ್ಯದ ಒಂದು ಭಂಗಿಯಲ್ಲಿ ಧೃತಿ

ತಾರೀಖು 27, ಜುಲೈ 2001 ರಂದ್ ದೂರದರ್ಶನಲಿ ;ಬೊಳಚ ಬೆಕ್ಕೊಂಡು; ತೇಳಿ ಕೊಡವ ಭಾಷೆದ್ ಹಾಡ್ ಇಂಪಾಗಿ ಕೇಳಿಸ್ತಾ ಇತ್ತ್. ಅರೆ ಈ ಹಾಡ್ ಎಲ್ಲೋ ಕೇಳ್ದಂಗೆ ಆದೆ ಅಲಾತೇಳಿ ಯೋಚನೆ ಮಾಡಿರೆ, ಅದ್ ನಮ್ಮ ಅರೆಭಾಷೆದ್ ಜ್ಯೋತಿಯ ಬೆಳಗೋಣ, ಕಾವೇರಿ ನಾಡನು ಕಟ್ಟೋಣ, ಈ ಹಾಡ್‌ನ ತದ್ರೂಪ್ ಅನುವಾದ ಆಗಿತ್ತ್.

ಈ ಹಾಡ್ ಮೊದಲ ಸಲ ಪ್ರತಿಧ್ವನಿಸಿದ್ ನೆಲಮಂಗಲದ ಕಾವೇರಿ ನಾಡ್ ವಿದ್ಯಾಸಂಸ್ಥೆಲಿ 1997ರ್ಲಿ ನಡೆದ ಕೈಲ್‌ಮೂರ್ತ ಸಮಾರಂಭಲಿ. ಹಾಡ್‌ಗೆ ಜೀವ ಕೊಟ್ಟ್ ನೃತ್ಯ ಮಾಡ್ದ್ ಆಗ 9 ನೇ ಕ್ಲಾಸ್‌ಲಿ ಓದ್‌ತಾ ಇರುವ ಚೂಟಿ ಗೂಡೆ ಧೃತಿ ಪೊನ್ನಪ್ಪ ಮತ್ತೆ ತಂಡದವು. ಶ್ರೀಮಾನ್ ಅಮ್ಮಾಜೀರ ಪೊನ್ನಪ್ಪ ದಂಪತಿಗಳ ಪುತ್ರಿಯಾದ ಇವ್ಳ 6 ನೇ ವಯಸ್ಸಿನಿಂದಾನೆ ಭರತನಾಟ್ಯ ತರಬೇತಿ ತಕಣ್‌ತಾ ಉಟ್ಟು. ಬೆಂಗಳೂರ್‌ನ ಕ್ರೈಸ್ಟ್ ಸ್ಕೂಲ್‌ಲಿ ಓದ್‌ತಾ ಇರುವ ಧೃತಿಗೆ ಪ್ರತೀ ವರ್ಷ ನಾಟ್ಯ ಸ್ಪರ್ಧೆಲಿ ಬಹುಮಾನ ಬರ್‍ತಾ ಇರ್ತಿತ್ತ್.

ಶ್ರೀಮಾನ್ ಪೊನ್ನಪ್ಪನವ್ರ ಮೊದಲ ಸಲ ಬಿಡುಗಡೆ ಮಾಡ್ದ 'ಪೊನಿಧ್ವನಿ' ಕ್ಯಾಸೆಟ್‌ನ ಎಲ್ಲಾ ಹಾಡ್‌ಗಳಿಗೆ ಧೃತಿ ಜೀವ ಕೊಟ್ಟ್ ನೃತ್ಯ ಮಾಡ್ದೆ. 1998 ರ ಮಡಿಕೇರಿ ದಸರಲಿ ಕಾವೇರಿ ನಾಡ್ ತಂಡ ಪ್ರೊಗ್ರಾಮ್ ಕೊಟ್ಟ್ ಜನಮನ್ನಣೆ ಗಳಿಸಿದಲ್ಲದೆ, ಈಗಾಗಲೇ ಭಾಗಮಂಡಲ, ಮರಗೋಡ್, ಪೆರಾಜೆ, ನಂಜರಾಯಪಟ್ಟಣ, ಮೈಸೂರು, ಸುಳ್ಯ ಸೋಮವಾರಪೇಟೆ, ಬೆಂಗಳೂರು, ಮಡಿಕೇರಿ, ಹಾಸನಲಿ ಯಶಸ್ವೀ ಕಾರ್ಯಕ್ರಮ ಕೊಟ್ಟೊಲೊ. ಉದಯಾ ಟಿವಿಲಿ ಪೆಪ್ಸಿ ಡ್ಯಾನ್ಸ್ ಡ್ಯಾನ್ಸ್ ಕಾರ್ಯಕ್ರಮಲಿ ಮೂಡಿಬಂದ ಸುಗ್ಗಿ ಸುವಾಲೆ ಕುಣಿತ ಮತ್ತೆ ಡೆನ್ನಾನೋ ಡೆನ್ನಾನೋ ನೃತ್ಯಕ್ಕೆ ಮೊದಲ ಬಹುಮಾನ ಬಂದುಟ್ಟು.

ಸದಾ ಹಸನ್ಮುಖಿಯಾಗಿ ಮನೆಗೆ ಬಂದ ನೆಂಟ್ರ್‌ಗಳ್ನ ಪದ್ಧತಿ ಪ್ರಕಾರ ಕಾಲ್ ಹಿಡ್ದ್ ಆಶೀರ್ವಾದ ಪಡೆದ್ ಎಲ್ಲಾ ನೃತ್ಯ ಕಾರ್ಯಕ್ರಮಗಳಲಿ ಭಾಗವಹಿಸಿ ಬಹುಮಾನಗಳ್ನ ಗಳಿಸಿ ಹೆತ್ತವ್‌ಕೆ ಕೀರ್ತಿ ತರ್‍ತಾ ಇರುವ ಧೃತಿಗೆ ವೆಟರ್‌ನರಿ ಡಾಕ್ಟರ್ ಆಕುತ ತುಂಬಾ ಇಷ್ಟ. ಇವಳ ಮೇಲೆ ವೆಂಕಟರಮಣನ ಕೃಪೆ ಮತ್ತೆ ತಾಯಿ ಶಾರದಾಂಬೆಯ ಕೃಪೆ ಸದಾ ಇರಲಿತ ನಮ್ಮೆಲ್ಲರ ಹಾರೈಕೆ.

-ಎಡಿಕೇರಿ ಸುದರ್ಶನ್, ಬೆಂಗಳೂರು.



ಅರೆಭಾಷೆ (ನಡುಗನ್ನಡ) ಮತ್ತು ಸಂಸ್ಕೃತಿಗೆ ತನ್ನ ನೃತ್ಯದ ಮೂಲಕ ಪುನರ್ಜ್ಜೀವನ ನೀಡಿದ ಕು. ಅಮ್ಮಾಜೀರ ಧೃತಿ ಪೊನ್ನಪ್ಪ, ಬೆಂಗಳೂರು.

**Kodagu Sangathi** Kannada Fortnightly Edited, Published, Printed by **Pattada Sheelamani**, # 12058 **"Sangathi Nilaya"**, Vijayanagar IV Stage, II Phase, Hinkal Post, Mysore - 570 017. ✆ : 0821/2901109
And Printed at Sri Gururaghavendra Printers, # 489, Devamba Agrahara, K.R. Mohalla, Mysore - 24 ✆ : 0821/2431792